ಓಂ

# ಭಗವದ್ವಿಷಯ ಗ್ರಂಥಮಾಲಾ

ಎರಡು

# ಶ್ರೀಮದ್ರಾಮಾಯಣಸಂಪ್ರದಾಯಾರ್ಥಸಂಗ್ರಹ

ಗ್ರಂಥಕರ್ತರು :
ಶ್ರೀಮತ್ಪರಮಹಂಸೇತ್ಯಾದಿ ಶ್ರೀಯದುಗಿರಿ
ಯತಿರಾಜಸಂಪತ್ಕುಮಾರರಾಮಾನುಜಜೀಯರ್‌ಸ್ವಾಮಿಗಳು

ಪ್ರಕಾಶಕರು :
ಶ್ರೀ ಯದುಗಿರಿಯತಿರಾಜಮಠ, ಸಂಸ್ಕೃತಿಪ್ರಚಾರಸಭಾ
ಮೇಲುಕೋಟೆ, (ತಿರುನಾರಾಯಣಪುರಂ)

೧೯೫೭ ಬೆಲೆ ಆರು ಆಣೆಗಳು

ಶ್ರೀಮತೇ ರಾಮಾನುಜಾಯ ನಮಃ



ಪರಮಹಂಸ ಪರಿವ್ರಾಜಕಾಚಾರ್ಯ-ಶ್ರೀ-ಉ

**ಶ್ರೀ ಯದುಗಿರಿ ಸಂಪತ್ಕುಮಾರ ರಾಮಾನುಜ ಜೀಯರ್**

**ಸ್ವಾಮಿಗಳು.**

# ವಿಷಯ ಸೂಚಿಕೆ



॥ಶ್ರೀಃ॥

॥ಶ್ರೀಮತೇ ರಾಮಾನುಜಾಯ ನಮಃ॥

# ಶ್ರೀರಾಮಾಯಣಸಂಪ್ರದಾಯಾರ್ಥಸಂಗ್ರಹ.

ಶ್ರೀಮದ್ರಾಮಾನುಜಾಚಾರ್ಯರು ಹಿಂದೆ ಶ್ರೀಶೈಲಪೂರ್ಣರಿಂದ ತಿಳಿದುಕೊಂಡ ಶ್ರೀರಾಮಾಯಣದ ಸಂಪ್ರದಾಯಾರ್ಥಗಳು ಹದಿನೆಂಟು. ಅವುಗಳನ್ನು ಸಂಕ್ಷೇಪವಾಗಿ ಕೆಳಗೆ ವಿವರಿಸಿರುತ್ತೆ.

**"ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್"** ಎಂಬ ಪ್ರಮಾಣವಚನದಂತೆ ಇತಿಹಾಸ ಮತ್ತು ಪುರಾಣಗಳು ವೇದದ ಅರ್ಥವನ್ನು ವಿವರಿಸಿ ಸ್ಪಷ್ಟಪಡಿಸತಕ್ಕವು. ಆ ವೇದದ ಪೂರ್ವಭಾಗದ ಅರ್ಥವನ್ನು ಧರ್ಮಶಾಸ್ತ್ರಗಳು ಪ್ರಕಾಶಪಡಿಸುವುವು. ಆದರ ಉತ್ತರಭಾಗವಾದ ವೇದಾಂತದ ಅಥವಾ ಉಪನಿಷತ್ತಿನ ಅರ್ಥವನ್ನು ಇತಿಹಾಸಪುರಾಣಗಳು ವಿವರಿಸುವುವು, ಇತಿಹಾಸಶ್ರೇಷ್ಠವಾದ ಶ್ರೀರಾಮಾಯಣವು ವೇದಾಂತದ ಅರ್ಥವನ್ನು ಪ್ರಕಾಶಪಡಿಸುತ್ತದೆ. ವೇದಾಂತವು ಮುಖ್ಯವಾಗಿ **ತತ್ವ, ಹಿತ, ಪುರುಷಾರ್ಥಗಳೆಂಬ** ಮೂರು ವಿಷಯಗಳನ್ನು ತಿಳಿಸತಕ್ಕದ್ದಾಗಿರುವುದು. ಆದರಲ್ಲಿ ಮೊದಲನೆಯದಾಗಿ **"ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ, ತದ್ವಿಜಿಜ್ಞಾಸಸ್ವ ತದ್ಬ್ರಹ್ಮ"** ಎಂಬ ವಾಕ್ಯದ ಮೂಲಕ ಪರತತ್ವ ಸ್ವರೂಪವನ್ನು ತಿಳಿಸುವುದು. ಸ್ಥೂಲವಾಗಿ ಜಗತ್ತಿಗೆ ಕಾರಣನು ಯಾವನೋ ಆತನೇ ಪರಬ್ರಹ್ಮನೆಂದು ಇದರಿಂದ ತಿಳಿದು ಬರುತ್ತದೆ. ಆದರೆ ಆ ಪರಬ್ರಹ್ಮನು ಯಾರು? ಬ್ರಹ್ಮನೇ, ವಿಷ್ಣುವೇ, ಅಥವಾ ರುದ್ರನೇ ಎಂದು ಪ್ರಶ್ನೆಮಾಡಲಾಗಿ, ಈ ಲೋಕದಲ್ಲಿ ಶ್ರೀರಾಮನಾಗಿ ಅವತಾರಮಾಡಿದ ವಿಷ್ಣುವೇ ಎಂಬ ವಿಶೇಷಾರ್ಥವನ್ನು ಈ ರಾಮಾಯಣ ಗ್ರಂಥವು ಸ್ಪಷ್ಟಪಡಿಸುತ್ತದೆ.

ಪ್ರತಿಯೊಂದು ಗ್ರಂಥಕ್ಕೂ ಒಂದು ತಾತ್ಪರ್ಯವುಂಟು. ಇದನ್ನು ಉಪಕ್ರಮೋಪಸಂಹಾರ, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ ಮತ್ತು ಉಪಪತ್ತಿ ಎಂಬ ಆರುಲಿಂಗ ಅಥವಾ ಗುರ್ತುಗಳಿಂದ ನಿರ್ಣಯ ಮಾಡಬಹುದೆಂದು ಶಾಸ್ತ್ರಜ್ಞರು ಹೇಳಿರುವರು. ಅದರಂತೆ ಶ್ರೀರಾಮಾಯಣದ ಮುಖ್ಯ ತಾತ್ಪರ್ಯವನ್ನು ಈ ಆರು ಲಿಂಗಗಳಿಂದ ನಿಶ್ಚಯಿಸಬಹುದು.

ಮೊದಲನೆಯದಾಗಿ, ಉಪಕ್ರಮವೆಂದರೆ- ಆರಂಭ. ಶ್ರೀ ರಾಮಾಯಣದ ಆರಂಭದಲ್ಲಿ, ''ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್'' ಎಂಬ ವಾಕ್ಯದಿಂದ ವಾಲ್ಮೀಕಿಯು ವೇದಾಂತದಲ್ಲಿ ಹೇಳಲ್ಪಟ್ಟಿರುವ ಸಕಲಗುಣಗಳಿಂದ ಕೂಡಿದ ದೈವವು ಬ್ರಹ್ಮನೋ, ರುದ್ರನೋ, ಅಥವಾ ವಿಷ್ಣುವೋ ಎಂದು ನಾರದಮಹರ್ಷಿಯನ್ನು ಕೇಳಲು ಆದಕ್ಕೆ, ''ಇಕ್ಷ್ವಾಕುವಂಶಪ್ರಭವೋ ರಾಮಃ" ಇಕ್ಷ್ವಾಕು ವಂಶದಲ್ಲಿ ಅವತಾರವೆತ್ತಿದ ರಾಮನೆಂದು ನಾರದರು ಉತ್ತರ ಕೊಟ್ಟಿರುವರು.

ಉಪಸಂಹಾರವೆಂದರೆ- ಗ್ರಂಥದ ಕೊನೆ. ಶ್ರೀ ರಾಮಾಯಣದ ಕೊನೆಯಲ್ಲಿ ''ತವಾಹಂ ಪೂರ್ವಕೇ ಭಾವೇ ಪುತ್ರಃ ಪರಪುರಂಜಯ" ಎಂದರೆ ಇತರರ ಪಟ್ಟಣವನ್ನು ಜಯಿಸಿದ ವಿಷ್ಣುವೇ, ನಿನಗೆ ನಾನು ಮೊದಲನೆಯ ಅವತಾರದಲ್ಲಿ ಮಗನು, ಎಂದೂ, ''ಮಹಾರ್ಣವೇ ಶಯಾನೋಽಪ್ಸುಮಾಂ ತ್ವಂ ಪೂರ್ವಮಜೀಜನಃ," ಎಲ್ಲಾ ಲೋಕಗಳನ್ನೂ ಸಂಹಾರಮಾಡಿ ಸಮುದ್ರದಲ್ಲಿ ಮಲಗಿಕೊಂಡು ನನ್ನನ್ನು ನಿನ್ನ ನಾಭೀಕಮಲದಿಂದ ಸೃಷ್ಟಿ ಮಾಡಿದೆ ಎಂದೂ, ''ಪ್ರಾಜಾಪತ್ಯಂ ತ್ವಯಾ ಕರ್ಮ ಸರ್ವಂ ಮಯಿ ನಿವೇಶಿತಂ'' ಪ್ರಜೆಗಳನ್ನು ಸೃಷ್ಟಿಮಾಡುವ ಕೆಲಸವನ್ನೆಲ್ಲಾ ನನಗೆ ಗೊತ್ತು ಮಾಡಿದೆ ಎಂದೂ ಚತುರ್ಮುಖಬ್ರಹ್ಮನು ಶ್ರೀರಾಮನಿಗೆ ಹೇಳಿರುವನು. ಇದರಿಂದ ವ್ಯಷ್ಟಿಸೃಷ್ಟಿ ಮಾಡತಕ್ಕ ಬ್ರಹ್ಮನಿಗೂ ವಿಷ್ಣುವು ಕಾರಣನೆಂದು ಹೇಳಿರುವುದರಿಂದ ಸಕಲ ಜಗತ್ಕಾರಣನಾದ ಪರಬ್ರಹ್ಮನು ವಿಷ್ಣುವೇ ಎಂದು ಶ್ರೀರಾಮಾಯಣವು ವಿವರಿಸಿ ತೋರಿಸಿಕೊಟ್ಟಂತಾಯಿತು.

ಎರಡನೆಯದಾಗಿ, ಅಭ್ಯಾಸ. ಅಭ್ಯಾಸವೆಂದರೆ ಒಂದೇ ವಿಷಯವನ್ನು ಅನೇಕಾವರ್ತಿ ಒತ್ತಿ ಹೇಳುವುದು. ಪ್ರಕೃತ ವಿಷ್ಣುವೇ ಜಗತ್ಕಾರಣನೆಂಬುದಕ್ಕೆ ಶ್ರೀ ರಾಮಾಯಣದಲ್ಲಿ ಅಭ್ಯಾಸವೂ ಉಂಟು. ಬಾಲಕಾಂಡದಲ್ಲಿ, "ಏತಸ್ಮಿನ್ನಂತರೇ ವಿಷ್ಣುರುಪಯಾತೋ ಮಹಾದ್ಯುತಿಃ| ಶಂಖ ಚಕ್ರಗದಾಪಾಣಿಃ ಪೀತವಾಸಾ ಜಗತ್ಪತಿಃ''ಅಂದರೆ, ಈ ಮಧ್ಯೇ ಮಹಾತೇಜಸ್ಸ್ವರೂಪಿಯಾಗಿ ಕೈಗಳಲ್ಲಿ ಶಂಖ ಚಕ್ರ ಗದೆಗಳನ್ನು ಧರಿಸಿ, ಹಳದಿ ಬಟ್ಟೆಯನ್ನುಟ್ಟ ಜಗತ್ತಿಗೆ ಪತಿಯಾದ ವಿಷ್ಣುವು ಅವತರಿಸಿದನು, ಎಂದು ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದೆ. ಅದರ ಮುಂದೆ "ತ್ವಂ ಗತಿಃ ಪರಮಾದೇವ ಸರ್ವೇಷಾಂ ನಃ ಪರಂತಪ'' ಎಲೈ ದೇವನೇ, ಶತ್ರುನಾಶಕನೇ, ನೀನೇ ನಮಗೆ ಶ್ರೇಷ್ಠನಾದ ಗತಿಯು, ಎಂದು ದೇವತೆಗಳು ಹೇಳಿರುವುದರಿಂದ ಪರತ್ವಕ್ಕೆ ಅಸಾಧಾರಣವಾದ ಸರ್ವಶರಣ್ಯತ್ವವನ್ನು ಹೇಳಿದಂತಾಯಿತು.

ಅದರ ಮುಂದೆ, "ತತೋ ದೇವರ್ಷಿಗಂಧರ್ವಾಸ್ಸರುದ್ರಾಸ್ಸಾಪ್ಸರೋಗಣಾಃ | ಸ್ತುತಿಭಿರ್ದಿವ್ಯರೂಪಾಭಿಃ ತುಷ್ಟುವುರ್ಮಧುಸೂದನಮ್ ‖ ರುದ್ರ ಮತ್ತು ಅಪ್ಸರಗಣಗಳೊಡನೆ ಕೂಡಿದ ದೇವ, ಋಷಿ, ಗಂಧರ್ವರು ಒಳ್ಳೆಯ ಸ್ತೋತ್ರಗಳಿಂದ ಮಧುಸೂದನನನ್ನು ಸಂತೋಷಪಡಿಸಿದರು ಎಂದು ಸರ್ವರಿಂದಲೂ ಸ್ತೋತ್ರಮಾಡಿಸಿಕೊಳ್ಳಲ್ಪಡುವಿಕೆಯು ಹೇಳಲ್ಪಟ್ಟಿದೆ. ಬಳಿಕ, "ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ| ವಸಿಷ್ಠೋಽಪಿ ಮಹಾತೇಜಾಯೇ ಚೇಮೇ ತಪಸಿ ಸ್ಥಿತಾಃ |" ಎಂದು ವಿಶ್ವಾಮಿತ್ರಮಹರ್ಷಿಗಳು ಹೇಳಿರುವರು. "ವೇದಾಹಮೇತಂ ಪುರುಷಂ ಮಹಾನ್ತಂ" ಎಂದು ಪುರುಷ ಸೂಕ್ತದಲ್ಲಿ ಹೇಳಿರುವ ಮಹಾಪುರುಷನಾದ, ಮಹಾತ್ಮನಾದ, ರಾಮನನ್ನು ನಾನಲ್ಲದೇ ಮಹಾತೇಜಸ್ವಿಯಾದ ವಸಿಷ್ಠನೂ ಇತರ ತಪಸ್ವಿಗಳೂ ತಿಳಿದಿರುವರು. ಈತನು ಮಹಾಪುರುಷನೆಂಬುದನ್ನರಿಯಬೇಕಾದರೆ ತಪಶ್ಶಕ್ತಿ ಬೇಕು. ಇಲ್ಲದಿದ್ದರೆ ಸಾಧ್ಯವಿಲ್ಲವೆಂದೂ ಮೇಲಿನ ಶ್ಲೋಕದಿಂದಲೂ, "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ, ಯಜ್ಞೇನ, ದಾನೇನ, ತಪಸಾಽನಾಶಕೇನ" ಎಂಬ ಶ್ರುತಿ ವಾಕ್ಯದಿಂದಲೂ ತಿಳಿದು ಬರುತ್ತದೆ.

ಹೀಗೆಯೇ ಸೀತಾದೇವಿಯ ವಿವಾಹಪ್ರಕರಣದಲ್ಲಿ ಶ್ರೀರಾಮನನ್ನು ಸ್ತೋತ್ರಮಾಡುತ್ತ ವಸಿಷ್ಠರು ಈ ರೀತಿ ಹೇಳಿರುತ್ತಾರೆ. "ಅವ್ಯಕ್ತ ಪ್ರಭವೋ ಬ್ರಹ್ಮಾ ಶಾಶ್ವತೋ ನಿತ್ಯ ಅವ್ಯಯಃ। ತಸ್ಮಾನ್ಮರೀಚಿಃ ಸಂಜಜ್ಞೇ ಮರೀಚೇಃ ಕಾಶ್ಯಪಸ್ಸುತಃ॥", ಅವ್ಯಕ್ತವಾದ ಈ ಜಗತ್ತಿಗೆ ಕಾರಣನಾದ ಬ್ರಹ್ಮನು, ಶಾಶ್ವತನು, ನಿತ್ಯನು, ನಾಶವಿಲ್ಲದವನು, ಆವನಿಂದ ಮರೀಚಿಯು ಹುಟ್ಟಿದನು. ಮರೀಚಿಯಿಂದ ಕಾಶ್ಯಪನೆಂಬ ಮಗನು ಹುಟ್ಟಿದನು, ಎಂದು ಎಲ್ಲ ಲೋಕಕ್ಕೂ ಆತನು ಕಾರಣನೆಂಬುದನ್ನು ತಿಳಿಸಿರುತ್ತಾರೆ. ಹೀಗೆಯೇ ಬಾಲಕಾಂಡದಲ್ಲಿ "ಅಧಿಕಂ ಮೇನಿರೇ ವಿಷ್ಣುಂ ದೇವಾಸ್ಸರ್ಷಿಗಣಾಸ್ತದಾ" ಋಷಿಗಳೊಡನೆ ಕೂಡಿದ ದೇವತೆಗಳು ವಿಷ್ಣುವೇ ಎಲ್ಲರಿಗಿಂತ ಹೆಚ್ಚೆಂದೂ ತಿಳಿದರು, ಎಂದು ಪರಶುರಾಮನು ವಿಷ್ಣುವಿನ ಸರ್ವಾಧಿಕತ್ವವನ್ನು ಘೋಷಿಸಿರುವನು. ಅಯೋಧ್ಯಾಕಾಂಡದಲ್ಲಿ "ಸ ಹಿ ದೇವೈರುದೀರ್ಣಸ್ಯ ರಾವಣಸ್ಯ ವಧಾರ್ಥಿಭಿಃ। ಅರ್ಥಿತೋ ಮಾನುಷೇ ಲೋಕೇ ಜಜ್ಞೇ ವಿಷ್ಣುಸ್ಸನಾತನಃ" ಎಂದರೆ ಉದ್ಧತನಾದ ರಾವಣನ ವಧೆಗಾಗಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಸನಾತನನಾದ ವಿಷ್ಣುವು ಮನುಷ್ಯಲೋಕದಲ್ಲಿ ರಾಮನಾಗಿ ಅವತರಿಸಿದನು, ಎಂದು ಆತನಿಗೆ ಸನಾತನತ್ವವು ಹೇಳಲ್ಪಟ್ಟಿರುವುದು. ಅದಕ್ಕೆ ಮುಂದೆ "ಆಕಾಶಪ್ರಭವೋ ಬ್ರಹ್ಮಾ ಶಾಶ್ವತೋ ನಿತ್ಯ ಅವ್ಯಯಃ" ಎಂದು ಶ್ರೀರಾಮನು ಆಕಾಶಕ್ಕೆ ಕಾರಣನೆಂದೂ, ವ್ಯಾಪಕನೆಂದೂ, ಶಾಶ್ವತನೆಂದೂ, ನಿತ್ಯನೆಂದೂ, ನಾಶವಿಲ್ಲದವನೆಂದೂ ಹೇಳಿ, ಆತನಿಗೆ ಸ್ವಯಂ ಪ್ರಕಾಶತ್ವವೂ ವ್ಯಾಪಕತ್ವವೂ ಉಂಟೆಂಬುದನ್ನು ವ್ಯಕ್ತಪಡಿಸಿರುತ್ತದೆ. ಅರಣ್ಯಕಾಂಡದಲ್ಲಿ "ಅಪ್ರಮೇಯಂ ಹಿ ತತ್ತೇಜಃ ಯಸ್ಯ ಸಾ ಜನಕಾತ್ಮಜಾ", ಜನಕಮಹಾರಾಜನ ಮಗಳು ಯಾವನ ಪತ್ನಿಯೋ, ಆ ತೇಜಸ್ಸು ಇಷ್ಟೆಂದು ಅಳತೆ ಮಾಡಲು ಅಶಕ್ಯವೆಂದು ಹೇಳಿ, ಶ್ರೀರಾಮನ ಮಹಿಮೆಯು ಅಪರಿಚ್ಛೇದ್ಯವಾದುದೆಂಬುದನ್ನು ಮಾರೀಚನ ಉಕ್ತಿಯಿಂದ ಸ್ಪಷ್ಟಪಡಿಸಿರುತ್ತದೆ. ಮುಂದೆ ಕಿಷ್ಕಿಂಧಾಕಾಂಡದಲ್ಲಿ, "ತ್ವಮಪ್ರಮೇಯಶ್ಚ ದುರಾಸದಶ್ಚ ಜಿತೇಂದ್ರಿಯ ಶ್ಚೋತ್ತಮಧಾರ್ಮಿಕಶ್ಚ। ಅಕ್ಷಯ್ಯಕೀರ್ತಿಶ್ಚ ವಿಚಕ್ಷಣಶ್ಚ ಕಿತಿಕ್ಷಮಾವಾ ಕ್ಷತಜೋಪಮಾಕ್ಷಃ", ಎಂದು ತಾರೆಯು, ಶ್ರೀರಾಮನು ಜಿತೇಂದ್ರಿಯ

ನೆಂದೂ, ಒಳ್ಳೆಯ ಧರ್ಮಿಷ್ಠನೆಂದೂ, ಅಳಿವಿಲ್ಲದ ಕೀರ್ತಿಯಿಂದ ಕೂಡಿದವನೆಂದೂ, ಸಮರ್ಥನೆಂದೂ, ಭೂಮಿಯಂತೆ ಸಹನೆಯುಳ್ಳವನೆಂದೂ, ಕಮಲದಂತೆ ಕಣ್ಣುಳ್ಳವನೆಂದೂ, ಅಪ್ರಮೇಯನೆಂದೂ, ಆತನನ್ನು ಹೊಂದಲು ಅಸಾಧ್ಯವೆಂದೂ ಹೇಳಿರುವಳು. ಅದಕ್ಕೆ ಮುಂದೆ, ನಿವಾಸವೃಕ್ಷಸ್ಸಾಧೂನಾಂ ಆಪನ್ನಾನಾಂ ಪರಾ ಗತಿಃ। ಆರ್ತಾನಾಂ ಸಂಶ್ರಯಶ್ಚೈವ ಯಶಸಶ್ಚೈಕಭಾಜನಂ। ಜ್ಞಾನವಿಜ್ಞಾನಸಂಪನ್ನೋ ನಿದೇಶೇ ನಿರತಃ ಪಿತುಃ। ಧಾತೂನಾಮಿವ ಶೈಲೇನ್ದ್ರೋ ಗುಣಾನಾಮಾಕರೋ ಮಹಾನ್। ಅಂದರೆ ಸಾಧುಗಳಿಗೆ ಆಶ್ರಯವನ್ನು ಕೊಡತಕ್ಕವನು, ಕಷ್ಟಕ್ಕೊಳಗಾದವರಿಗೆ ದಿಕ್ಕು, ದುಃಖಿಗಳಿಗೆ ಆಶ್ರಯನು ಕೀರ್ತಿಗೆ ತವರುಮನೆ, ಜ್ಞಾನವಿಜ್ಞಾನಗಳಿಂದ ಕೂಡಿದವನು, ತಂದೆಯ ಅಪ್ಪಣೆಯನು ನಡೆಸುವುದರಲ್ಲಿ ನಿರತನು, ಮಣಿಶಿಲಾದಿಧಾತುಗಳಿಗೆ ಪರ್ವತವು ಹೇಗೆ ಆಕರವೋ ಹಾಗೆ ಈತನು ಒಳ್ಳೇಗುಣಗಳಿಗೆಲ್ಲಾ ಆಕರನು. ಎಂದು ಶ್ರೀರಾಮನಿಗೆ ಜ್ಞಾನಾನಂದವೇ ಮೊದಲಾದ ಸಕಲ ಕಲ್ಯಾಣಗುಣಾಕರತ್ವವನ್ನು ಹೇಳಿರುತ್ತದೆ. ಸುಂದರಕಾಂಡದಲ್ಲಿ– ಬ್ರಹ್ಮಾ ಸ್ವಯಂಭೂಶ್ಚತುರಾನನೋ ವಾ ರುದ್ರಸ್ತ್ರಿಣೇತ್ರಸ್ತ್ರಿಪುರಾಂತಕೋ ವಾ। ಇಂದ್ರೋ ಮಹೇಂದ್ರ ಸ್ಸುರನಾಯಕೋವಾ ತ್ರಾತುಂ ನ ಶಕ್ತಾ ಯುಧಿ ರಾಮವಧ್ಯಂ" ಶ್ರೀರಾಮನಿಂದ ಕೊಲ್ಲಲ್ಪಡತಕ್ಕ ರಾವಣನನ್ನು ಸಂರಕ್ಷಿಸಲು, ಚತುರ್ಮುಖಬ್ರಹ್ಮನಿಗಾಗಲಿ, ಮುಕ್ಕಣ್ಣನಾದ ರುದ್ರನಿಗಾಗಲಿ, ದೇವತೆಗಳಿಗೆ ನಾಯಕನಾದ ದೇವೇಂದ್ರನಿಗಾಗಲಿ ಸಾಧ್ಯವಿಲ್ಲವೆಂದು ಆತನಿಗೆ ಸರ್ವಸಂಹಾರಕತ್ವವನ್ನು ಹೇಳಿದೆ. ಇದರ ಮುಂದೆ, "ಕಿಂ ವೈಷ್ಣವಂ ವಾ ಕಪಿರೂಪಮೇತ್ಯ ರಕ್ಷೋವಿನಾಶಾಯ ಪರಂ ಸುತೇಜಃ। ಅನನ್ತಮವ್ಯಕ್ತಮಚಿನ್ತ್ಯಮೇಕಂ (ರೂಪಂ) ಸ್ವಮಾಯಯಾ ಸಾಂಪ್ರತಮಾಗತಂ ವಾ", ವಿಷ್ಣುವಿನ ತೇಜಸ್ಸು ಕಪಿರೂಪವನ್ನು ಧರಿಸಿ ರಾಕ್ಷಸರನ್ನು ನಾಶಮಾಡಲು ಈಗ ಬಂದಿದೆಯೋ ಎಂದು ಆತನಿಗೆ ಅನಂತರೂಪವು ಉಂಟೆಂಬುದನ್ನು ಹೇಳಿದೆ.

ಯುದ್ಧಕಾಂಡದಲ್ಲಿ – "ಹಿರಣ್ಯಗರ್ಭಸ್ಸಮವರ್ತತಾಗ್ರೇ" ಎಂಬ ಶ್ರುತಿಯು ಬ್ರಹ್ಮನಿಗೆ ಜಗತ್ಕಾರಣತ್ವವನ್ನೂ, "ಯದಾತಮಸ್ತನ್ನ ದಿವಾ ನ ರಾತ್ರಿಃ। ನಸನ್ನಚಾಸಚ್ಛಿವ ಏವ ಕೇವಲಃ" ಎಂಬ ಶ್ರುತಿಯು ಶಿವನಿಗೆ ಕಾರಣತ್ವವನ್ನೂ, "ಇಂದ್ರೋ ಮಾಯಾಭಿಃ ಪುರು ರೂಪ ಈಯತೇ" ಎಂಬ ಶ್ರುತಿಯು ಇಂದ್ರನಿಗೆ ಜಗತ್ಕಾರಣತ್ವವನ್ನು ತಿಳಿಸುವಾಗ, ವಿಷ್ಣುವೇ ಹೇಗೆ ಜಗತ್ಕಾರಣನು ಎಂದು ಆಕ್ಷೇಪಿಸಿ, ಬ್ರಹ್ಮಾ, ಶಿವ, ಇಂದ್ರ, ಇವರೆಲ್ಲರಿಗಿಂತಲೂ ವಿಷ್ಣುವೇ ಶ್ರೇಷ್ಠನೆಂದು ಹೇಳಿರುವುದರಿಂದ, ಕಾರಣತ್ವವನ್ನು ಬೋಧಿಸತಕ್ಕ ಸತ್, ಬ್ರಹ್ಮ, ಆತ್ಮಾ, ಮೊದಲಾದ ಶಬ್ದಗಳು ವಿಷ್ಣುವನ್ನು ಹೇಳುವಂತೆ, ಮೇಲ್ಕಂಡ ಶ್ರುತಿಗಳಲ್ಲಿರುವ ಹಿರಣ್ಯಗರ್ಭ, ಶಿವ, ಇಂದ್ರ, ಮೊದಲಾದ ಶಬ್ದಗಳು ವಿಷ್ಣುವನ್ನೇ ಬೋಧಿಸಿ ಅವನಿಗೇ ಜಗತ್ಕಾರಣತ್ವವನ್ನು ತಿಳಿಸುತ್ತವೆಯೆಂದು ಸಮಾಧಾನಕೊಟ್ಟು, ಇದೇ ಅಭಿಪ್ರಾಯವನ್ನು "ವ್ಯಕ್ತಮೇಷಮಹಾಯೋಗೀ ಪರಮಾತ್ಮಾ ಸನಾತನಃ। ಅನಾದಿ ಮಧ್ಯನಿಧನೋಮಹತಃ ಪರಮೋ ಮಹಾನ್॥ ತಮಸಃ ಪರಮೋ ಧಾತಾ ಶಂಖಚಕ್ರಗದಾಧರಃ" ಎಂಬ ಶ್ಲೋಕಗಳಿಂದ ಸಮರ್ಥಿಸಿರುತ್ತದೆ. ಈ ಶ್ಲೋಕಗಳಿಂದ ಪರಮಾತ್ಮನು ಆದ್ಯಂತಗಳಿಲ್ಲದವನೆಂದೂ, ಎಲ್ಲಕ್ಕಿಂತಲೂ ದೊಡ್ಡವನೆಂದೂ, ಅಪ್ರಾಕೃತವೈಕುಂಠವಾಸಿಯೆಂದೂ, ಶಂಖಚಕ್ರಗದಾಧಾರಿಯೆಂದೂ, ಶ್ರೀವತ್ಸವೆಂಬ ಚಿಹ್ನೆಯುಳ್ಳವನೆಂದೂ, ಶ್ರಿಯಃಪತಿಯೆಂದೂ, ಅಜೇಯನೆಂದೂ, ಶಾಶ್ವತನೆಂದೂ, ತಿಳಿದುಬರುತ್ತದೆ. ಮುಂದೆ, "ಭವಾನ್‌ನಾರಾಯಣೋದೇವಃ ಶ್ರೀಮಾನ್‌ಚಕ್ರಾಯುಧೋವಿಭುಃ। ಏಕಶೃಂಗೋ ವರಾಹಸ್ತ್ವಂ ಭೂತಭವ್ಯಸಪತ್ನಜಿತ್" ಎಂಬ ಶ್ಲೋಕದಿಂದ ಶ್ರೀರಾಮನೇ ಶ್ರೀಮನ್ನಾರಾಯಣನೆಂದು ಹೇಳಲ್ಪಟ್ಟಿದೆ. ಹೀಗೆ, ಉಪಕ್ರಮೋಪಸಂಹಾರ, ಅಭ್ಯಾಸವೆಂಬ ಎರಡು ಲಿಂಗಗಳಿಂದ, ಉಪನಿಷತ್ತುಗಳಲ್ಲಿ ಹೇಳತಕ್ಕ ಪರಬ್ರಹ್ಮನೇ ನಾರಾಯಣನು, ವಿಷ್ಣುವು. ಆತನೇ ಪರತತ್ವವು. ಆತನ ಅವತಾರವೇ ಶ್ರೀರಾಮನು ಎಂಬುದು ಸ್ಪಷ್ಟಪಟ್ಟಿತು.

ಮೂರನೆಯ ಲಿಂಗವು ''ಅಪೂರ್ವತೆ"– ಅಪೂರ್ವತೆ ಎಂದರೆ ಬೇರೆ ಪ್ರಮಾಣಗಳಿಂದ ತಿಳಿಯದ ಹೊಸವಿಷಯವನ್ನು ತಿಳಿಸತಕ್ಕದು. ಶ್ರೀರಾಮನಾದ ವಿಷ್ಣುವೇ ಪರತತ್ವವೆಂಬಂಶವು ಇತಿಹಾಸ ಪುರಾಣಗಳಿಂದಲ್ಲದೆ ಬೇರೆ ಗ್ರಂಥಗಳಿಂದ ತಿಳಿದು ಬರುವುದಿಲ್ಲವಾದುದರಿಂದ ಈ ಗ್ರಂಥದಲ್ಲಿ ಅಪೂರ್ವತೆಯೂ ಉಂಟು.

ಭಗವಂತನಿರುವ ವೈಕುಂಠಲೋಕವನ್ನು ಚೇತನರು ಸೇರುತ್ತಾರೆಂಬ ಫಲವನ್ನು ಈ ಗ್ರಂಥದ ಕೊನೆಯಲ್ಲಿ ಹೇಳಿರುವುದರಿಂದ ನಾಲ್ಕನೆಯ ಲಿಂಗವಾದ ಫಲವೂ ಈ ಗ್ರಂಥದಲ್ಲಿರುವುದು.

ಬಾಲಕಾಂಡದಲ್ಲಿ ''ಇಮೇ ದ್ವೇ ಧನುಷೀ ಶ್ರೇಷ್ಠೇ'', ಇವೆರಡೂ ಶ್ರೇಷ್ಠವಾದ ಧನುಸ್ಸುಗಳೆಂದು ಪ್ರಶಂಸಾರೂಪವಾದ ಅರ್ಥವಾದವೆಂಬ ಐದನೆಯ ಲಿಂಗವನ್ನು ಈ ಗ್ರಂಥದಲ್ಲಿ ಕಾಣಬಹುದು. ಅದರಲ್ಲಿ ''ಜೃಂಭಿತಂ ತದ್ಧನುರ್ದೃಷ್ಟ್ವಾ ಶೈವಂ ವಿಷ್ಣುಪರಾಕ್ರಮೈಃ। ಅಧಿಕಂಮೇನಿರೇ ವಿಷ್ಣುಂ ದೇವಾಸ್ಸರ್ಷಿಗಣಾಸ್ತದಾ" ವಿಷ್ಣುವಾದ ರಾಮನ ಪರಾಕ್ರಮದಿಂದ ಆ ಶಿವಧನುಸ್ಸು ಮುರಿದುಬಿದ್ದುದನ್ನು ಋಷಿಗಳೂ ದೇವತೆಗಳೂ ಕಂಡು, ಆತನನ್ನು ಅಧಿಕನನ್ನಾಗಿ ತಿಳಿದರು, ಎಂದು ಆರನೆಯ ಲಿಂಗವಾದ ಉಪಪತ್ತಿಯಿಂದಲೂ ವಿಷ್ಣುವೇ ಪರತತ್ವವೆಂಬುದನ್ನು ತಿಳಿಯಬಹುದು.

ವಿಷ್ಣುವೇ ಪರದೇವತೆಯಾದರೆ ಆತನು ರಾಮನಾಗಿ ಜನ್ಮವೆತ್ತಿದುದು ಹೇಗೆ ಎಂದು ಶಂಕಿಸಬೇಕಾಗಿಲ್ಲ. "ಅಜಾಯಮಾನೋ ಬಹುಧಾ ವಿಜಾಯತೇ'' ಎಂಬ ಶ್ರುತಿಯ ಪ್ರಕಾರ ಆತನು ಲೋಕಕಲ್ಯಾಣಕ್ಕಾಗಿ ತನ್ನ ಸ್ವಂತ ಇಚ್ಛೆಯಿಂದ ನಾನಾವಿಧವಾಗಿ ಅವತರಿಸುವನಾದ್ದರಿಂದ ರಾಮನಾಗಿ ಅವತಾರವೆತ್ತಿದುದು ಯುಕ್ತವೇ. ಅಲ್ಲದೆ ಪರದೇವತೆಯ ಅಸಾಧಾರಣ ಧರ್ಮವಾದ ''ಮೋಕ್ಷಪ್ರದತ್ವ'' ಅಥವಾ ಮೋಕ್ಷವನ್ನು ಕೊಡುವಿಕೆಯು ಇವನಿಗಿರುವುದಾಗಿ ಹೇಳಿದೆ. ಹೇಗೆಂದರೆ- ''ಯಾಗತಿರ್ಯಜ್ಞಶೀಲಾನಾಮಾಹಿತಾಗ್ನೇಶ್ಚ ಯಾಗತಿಃ। ಅಪರಾವರ್ತಿನಾಂ ಯಾಚ ಯಾಚ ಭೂಮಿಪ್ರದಾಯಿನಾಂ। ಮಯಾ ತ್ವಂ ಸಮನುಜ್ಞಾತೋ ಗಚ್ಛಲೋಕಾನನುತ್ತಮಾನ್॥''ಎಂದರೆ ಯಜ್ಞ

ಮಾಡಿದವರಿಗೆ ಯಾವ ಫಲವೋ, ಅಹಿತಾಗ್ನಿಯನ್ನಿಟ್ಟಿರುವವನಿಗೆ ಯಾವ ಫಲವೋ, ಪುನರಾವೃತ್ತಿಯಿಲ್ಲದವರಿಗೆ ಯಾವ ಫಲವೋ, ಭೂದಾನ ಮಾಡಿದವರಿಗೆ ಯಾವ ಫಲವೋ, ಅಂತಹ ಉತ್ತಮ ಲೋಕಗಳನ್ನು ನನ್ನ ಅಪ್ಪಣೆಯಿಂದ ಹೊಂದು ಎಂದು ಜಟಾಯುವಿಗೆ ಶ್ರೀರಾಮನು ಮೋಕ್ಷವನ್ನು ಕೊಟ್ಟಿರುವುದಾಗಿ ಹೇಳಿರುವುದು. ಇಲ್ಲಿ ''ಅಪರಾವೃತ್ತಿ'' ಎಂದರೆ ಪುನರಾವೃತ್ತಿ ಇಲ್ಲದಿರುವಿಕೆ. ಇದೇ ಮುಕ್ತಿ.

ಹೀಗೆ ಉಪಕ್ರಮೋಪಸಂಹಾರವೇ ಮೊದಲಾದ ಆರು ಲಿಂಗಗಳಿಂದ ವೇದಾಂತದಲ್ಲಿ ಹೇಳುವ ಪರತತ್ತ್ವವು ವಿಷ್ಣುವೇ ಎಂಬುದನ್ನು ಶ್ರೀರಾಮಾಯಣವು ವಿವರಿಸುತ್ತದೆ. ಬಾಲಕಾಂಡದಲ್ಲಿ- ಶ್ರೀರಾಮನು, ಜಗತ್ಸೃಷ್ಟಿಗೆ ಕಾರಣನೆಂಬುದನ್ನೂ, ಎರಡನೆಯದಾದ ಅಯೋಧ್ಯಾಕಾಂಡದಲ್ಲಿ- ಆತನೇ ಜಗತ್ತಿನ ಸ್ಥಿತಿಗೆ ಕಾರಣನು ಅಥವಾ ರಕ್ಷಕನೆಂದೂ, ಆರಣ್ಯಕಾಂಡದಲ್ಲಿ- ಆತನು ಮೋಕ್ಷಕೊಡತಕ್ಕವನೆಂದೂ, ಕಿಷ್ಕಿಂಧಾಕಾಂಡದಲ್ಲಿ- ಸರ್ವಗುಣಸಂಪನ್ನನೆಂದೂ, ಸುಂದರಕಾಂಡದಲ್ಲಿ- ಸರ್ವಸಂಹಾರಕನೆಂದೂ, ಯುದ್ಧಕಾಂಡದಲ್ಲಿ- ವೇದಾಂತವೇದ್ಯನೆಂದೂ, ಉತ್ತರಕಾಂಡದಲ್ಲಿ- ಆತನೇ ಚತುರ್ಮುಖಾದಿಗಳ ಸೃಷ್ಟಿಗೆ ಕಾರಣನೆಂದೂ, ಹೇಳುತ್ತದೆ. ಆದ್ದರಿಂದ ಶ್ರೀರಾಮನಾದ ವಿಷ್ಣುವೇ ಪರತತ್ತ್ವನೆಂದು ನಿಶ್ಚಿತವಾಯಿತು.

II ಹೀಗೆ ಪರತತ್ತ್ವಸ್ವರೂಪವನ್ನು ವಿವರಿಸಿದಮೇಲೆ ಅದನ್ನು ಹೊಂದುವ ಹಿತ, ಸಾಧನ, ಅಥವಾ ಉಪಾಯವು ಯಾವದೆಂಬುದನ್ನು ಈ ಗ್ರಂಥವು ಸ್ಪಷ್ಟಪಡಿಸಬೇಕು, ಅದಕ್ಕಾಗಿ ಶ್ರುತಿಗಳಲ್ಲಿ ಪರತತ್ತ್ವವನ್ನು ಹೊಂದಲು ಶರಣಾಗತಿಯೇ ಶ್ರೇಷ್ಠವಾದ ಉಪಾಯವೆಂದು ಹೇಳಿರುವುದನ್ನು ವಾಲ್ಮೀಕಿಮಹರ್ಷಿಗಳು ಶ್ರೀರಾಮಾಯಣದಲ್ಲಿ ವಿಶದಪಡಿಸಿರುವರು.

"ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ, ಮುಮುಕ್ಷುರ್ವೈ ಶರಣಮಹಂಪ್ರಪದ್ಯೇ'' (ಯಾವನು ಪೂರ್ವದಲ್ಲಿ ಬ್ರಹ್ಮನನ್ನು ಸೃಷ್ಟಿಸಿ, ಆತನಿಗೆ ವೇದಗಳನ್ನು ಉಪದೇಶಿಸಿದನೋ

ಆ ನಾರಾಯಣನನ್ನು ಮೋಕ್ಷಾರ್ಥಿಯಾದ ನಾನು ಉಪಾಯವನ್ನಾಗಿ ನಿಶ್ಚಯಿಸಿರುತ್ತೇನೆ), ಎಂಬ ಈ ಶ್ರುತಿಯು ಶರಣಾಗತಿಯೇ ಉಪಾಯ ವೆಂಬುದನ್ನು ಹೇಳಿರುವುದು. ಈ ಶರಣಾಗತಿಯನ್ನು ಮಾಡತಕ್ಕ ನಾನಾ ಬಗೆಯ ಅಧಿಕಾರಿಗಳನ್ನೂ, ಅವರವರಿಗೆ ಬರತಕ್ಕ ನಾನಾವಿಧ ಫಲಗಳನ್ನೂ ಶ್ರೀರಾಮಾಯಣವು ಉಪಕ್ರಮದಿಂದ ಉಪಸಂಹಾರಾನ್ತ, ಅಂದರೆ ಆರಂಭ ದಿಂದ ಕಡೆಯವರೆಗೂ ವಿಶದಪಡಿಸಿರುತ್ತದೆ. ಹೇಗೆಂದರೆ–

1) ಈ ಗ್ರಂಥದ ಆರಂಭದಲ್ಲಿ, "ಏತಸ್ಮಿನ್ನಂತರೇ ವಿಷ್ಣುರುಪ ಯಾತೋ ಮಹಾದ್ಯುತಿಃ" ಎಂದು ಸರ್ವಶೇಷಿಯಾದ ಸರ್ವೇಶ್ವರನು, ಚೇತ ನರು ತನ್ನ ರಕ್ಷಣೆಯನ್ನು ಅಪೇಕ್ಷಿಸುವುದನ್ನು ಇದಿರುನೋಡುತ್ತಾ, ರಕ್ಷ ಣಕ್ಕೆ ಸಮಯವು ದೊರಕಿತೆಂದು ಸಂತೋಷಗೊಂಡು ರಕ್ಷಣೆಗೆ ಬೇಕಾದ ಸಲಕರಣೆಗಳೊಡನೆ ಬಂದನೆಂದು ಶ್ರುತಿಯು ತಿಳಿಸುವುದು ಮತ್ತು ಆ ಕಾಲ ದಲ್ಲಿ, " ತತಸ್ತ್ವಾಂ ಶರಣಂಗತಾಃ " ಎಂದು ದೇವತೆಗಳೂ, ಯಕ್ಷರೂ, ಗಂಧರ್ವರೂ ಶರಣಾಗತಿಯನ್ನು ಮಾಡಿದರು. ಇವರು ರಾವಣನ ವಧೆ ಗಾಗಿ ಶರಣಾಗತಿಯನ್ನು ಮಾಡಿದುದಾಗಿ ಹೇಳಿದೆ.

2) ಬಳಿಕ, ತ್ರಿಶಂಕು, ಶುನಶ್ಶೇಫಾದಿಗಳ ವೃತಾಂತದಲ್ಲಿ ವಿಶ್ವಾ ಮಿತ್ರರೇ ಮೊದಲಾದವರ ಕಾರ್ಯಗಳನ್ನು ಹೇಳಿ, ಶರಣುಹೊಕ್ಕವನನ್ನು ಕಾಪಾಡತಕ್ಕದ್ದು ಶ್ರೇಷ್ಠವಾದ ಧರ್ಮವೆಂದೂ, ಸರ್ವಸಮರ್ಥನೂ ಪರಮ ಕಾರುಣಿಕನೂ ಆದವನಲ್ಲಿ ಮಾಡಿದ ಶರಣಾಗತಿಯು ಖಂಡಿತವಾಗಿ ಫಲ ಕೊಡುವುದೆಂದೂ ಸ್ಪಷ್ಟಪಡಿಸಿರುತ್ತದೆ.

3) ಬಳಿಕ, " ಸಭ್ರಾತುಶ್ಚರಣೌ ಗಾಢಂ ನಿಪೀಡ್ಯ ರಘುನಂದನಃ ಸೀತಾಮುವಾಚಾತಿಯಶಾ ರಾಘವಂ ಚ ಮಹಾವ್ರತಂ," ಆ ಲಕ್ಷ್ಮಣನು ಅಣ್ಣನಾದ ಶ್ರೀರಾಮನ ಪಾದಗಳಿಗೆರಗಿ ಪುರುಷಕಾರಳಾದ ಸೀತೆಯನ್ನೂ, ಮಹಾವ್ರತಶಾಲಿಯಾದ ಶ್ರೀರಾಮನನ್ನೂ ಕುರಿತು ಹೇಳಿದನು, ಎಂದು ಮಧ್ಯಸ್ಥಳಾದ ಸೀತೆಯನ್ನು ಮುಂದಿಟ್ಟುಕೊಂಡು ಶರಣಾಗತಿಯನ್ನು ಮಾಡಿ ರುವುದಾಗಿ ವಾಲ್ಮೀಕಿಯು ಹೇಳಿರುವರು.

4) ಭರತನು, “ ಶೇಷ್ಯೇ ಪುರಸ್ತಾಚ್ಛಾಲಾಯಾಃ ಯಾವನ್ಮೇ ನ ಪ್ರಸೀದತಿ,” ಶ್ರೀರಾಮನು ಪ್ರಸನ್ನನಾಗುವವರೆಗೆ ಪರ್ಣಶಾಲೆಯ ಮುಂದೆ ಮಲಗುತ್ತೇನೆಂದು, ಶ್ರೀರಾಮನನ್ನು ಪಟ್ಟಾಭಿಷೇಕಮಾಡಿಕೊಳ್ಳಲು ಅಯೋಧ್ಯೆಗೆ ಹಿಂತಿರುಗಿಸಲು ಶರಣಾಗತಿಯನ್ನು ಮಾಡಿರುವನು. ರಾವಣನ ಸಂಹಾರಕ್ಕಾಗಿ ದೇವತೆಗಳು ಮಾಡಿದ ಶರಣಾಗತಿಗೆ ಫಲವನ್ನು ಕೊಡಲು ಶ್ರೀರಾಮನು ಹೊರಟದ್ದರಿಂದ ಭರತನ ಶರಣಾಗತಿಗೆ ಕೂಡಲೇ ಫಲವು ದೊರೆಯಲಿಲ್ಲ. ರಾವಣನ ವಧೆಯಾದಮೇಲೆ ಇದಕ್ಕೆ ಫಲ ಸಿಕ್ಕಿತು. ಆದರೂ ಸದ್ಯಕ್ಕೆ ರಾಮನ ಪ್ರತಿನಿಧಿಯಾದ ಪಾದುಕೆಗಳು ಸಿಕ್ಕಿ ಅದು ಫಲಕಾರಿಯಾಯಿತು. ಶರಣಾಗತಿಯು ವಿಫಲವಾಗಲಿಲ್ಲ.

5) ಬಳಿಕ ದಂಡಕಾರಣ್ಯವಾಸಿಗಳು- “ತೇ ವಯಂ ಭವತಾ ರಕ್ಷ್ಯಾ ಭವದ್ವಿಷಯವಾಸಿನಃ॥ ನಗರಸ್ಥೋ ವನಸ್ಥೋ ವಾ ತ್ವಂ ನೋ ರಾಜಾ ಜನೇಶ್ವರ॥ ” ನಿನ್ನ ದೇಶದಲ್ಲಿ ವಾಸಿಸುವ ನಾವು ನಿನ್ನಿಂದ ರಕ್ಷಿಸಲ್ಪಡತಕ್ಕವರು. ನೀನು ಪಟ್ಟಣದಲ್ಲಿದ್ದರೂ ಸರಿ, ಕಾಡಿನಲ್ಲಿದ್ದರೂ ಸರಿ, ನೀನೇ ನಮಗೆ ರಾಜನು. ಎಂದು ತಮ್ಮ ವಿರೋಧಿಗಳ ನಾಶಕ್ಕಾಗಿ ಶರಣಾಗತಿಯನ್ನು ಮಾಡಿರುತ್ತಾರೆ. ಇಲ್ಲಿ ಭಗವಂತನಿರುವ ದೇಶದಲ್ಲಿರುವುದೇ ಶರಣಾಗತಿ.

6) ಸ ಪಿತ್ರಾ ಚ ಪರಿತ್ಯಕ್ತಸ್ಸುರೈಶ್ಚ ಸಮಹರ್ಷಿಭಿಃ। ತ್ರೀನ್ ಲೋಕಾನ್ ಸಂಪರಿಕ್ರಮ್ಯ ತಮೇವ ಶರಣಂ ಗತಃ॥ ಸ ತಂ ನಿಪತಿತಂ ಭೂಮೌ ಶರಣ್ಯಃ ಶರಣಾಗತಂ । ವಧಾರ್ಹಮಪಿ ಕಾಕುತ್ಸ್ಥಃ ಕೃಪಯಾ ಪರ್ಯಪಾಲಯತ್’’ ಆ ಕಾಕಾಸುರನು, ತಂದೆಯಿಂದಲೂ, ದೇವತೆಗಳಿಂದಲೂ, ಋಷಿಗಳಿಂದಲೂ ಬಿಡಲ್ಪಟ್ಟವನಾಗಿ ಮೂರುಲೋಕಗಳನ್ನೂ ಸುತ್ತಿ ಕೊನೆಗೆ ಶ್ರೀರಾಮನನ್ನೇ ಶರಣುಹೊಕ್ಕನು. ಹೀಗೆ ಆತನ ಮುಂದೆ ಬಿದ್ದಿದ್ದ ಆ ಕಾಕನನ್ನು ಕೊಲ್ಲಲು ಶ್ರೀರಾಮನು ಸಮರ್ಥನಾಗಿದ್ದರೂ ಕೃಪೆಯಿಂದ ಕಾಪಾಡಿದನು ಎಂದು ಕಾಕಾಸುರನ ವೃತ್ತಾಂತದಲ್ಲಿ ಶರಣ್ಯನ ಮುಂದೆ ಬೀಳುವುದೇ ಶರಣಾಗತಿಯೆಂದು ಹೇಳಿದೆ.

7) ''ಕೃತಾಪರಾಧಸ್ಯ ಹಿ ತೇ ನಾನ್ಯತ್ಪಶ್ಯಾಮ್ಯಹಂ ಕ್ಷಮಂ । ಅಂತರೇಣಾಂಜಲಿಂ ಬದ್ಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್" ಮಾತಿಗೆ ತಪ್ಪಿದ ನಿನಗೆ ಅಂಜಲಿಮಾಡಿ ಲಕ್ಷ್ಮಣನನ್ನು ಪ್ರಸನ್ನನಾಗಿ ಮಾಡಿಕೊಳ್ಳುವುದಕ್ಕಿಂತ ಬೇರೆ ಉಪಾಯವಿಲ್ಲವೆಂದು ಸುಗ್ರೀವನ ವೃತ್ತಾಂತದಲ್ಲಿ ಅಂಜಲಿಯೇ ಶರಣಾಗತಿಯೆಂಬುದಾಗಿ ಹೇಳಿದೆ.

8) ಮಿತ್ರಮೌಪಯಿಕಂ ಕರ್ತುಂ ರಾಮಸ್ಸ್ಥಾನಂ ಪರೀಪ್ಸತಾ । ವಧಂ ಚಾನಿಚ್ಛತಾ ಘೋರಂ ತ್ವಯಾಸೌ ಪುರುಷರ್ಷಭಃ । ವಿದಿತಸ್ಸಹಿ ಧರ್ಮಜ್ಞಶ್ಶರಣಾಗತವತ್ಸಲಃ। ತೇನ ಮೈತ್ರೀ ಭವತು ತೇ ಯದಿಜೀವಿತುಮಿಚ್ಛಸಿ " ನಿನಗೊಂದು ಸ್ಥಾನಬೇಕಾದರೂ, ನಿನಗೆ ಚಿತ್ರವಧೆ ಆಗದೆ ಇರಬೇಕಾದರೂ, ಆ ರಾಮನನ್ನು ಮಿತ್ರನನ್ನಾಗಿ ಮಾಡಿಕೊಳ್ಳುವುದು ಯುಕ್ತವು. ನೀನು ಬದುಕಬೇಕಾದರೆ ಆ ರಾಮನೊಡನೆ ನಿನಗೆ ಸ್ನೇಹವು ಉಂಟಾಗಲಿ ಎಂದು ಸೀತೆಯು ರಾವಣನಿಗೆ ಹೇಳಿದ ಮಾತುಗಳಿಂದ ಅನುಕೂಲವಾಗಿ ವರ್ತಿಸುವುದೇ ಶರಣಾಗತಿಯೆಂದು ಹೇಳಿದೆ.

9) ಹಾಗೆಯೇ, " ಸೋಽಹಂ ಪರುಷಿತಸ್ತೇನ ದಾಸವಚ್ಚಾಽವಮಾನಿತಃ। ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಂ ಗತಃ'' ರಾವಣನ ಕಟುವಾದ ಟೀಕೆಗಳಿಗೆ ಗುರಿಯಾಗಿ ಆತನಿಂದ ಆಳಿನಂತೆ ಹಿಯ್ಯಾಳಿಸಲ್ಪಟ್ಟ ನಾನು ಹೆಂಡತಿಮಕ್ಕಳನ್ನು ತೊರೆದು ಶ್ರೀರಾಮನನ್ನು ಮರೆಹೊಕ್ಕೆನೆಂದು ವಿಭೀಷಣನು ತನ್ನ ವಿರೋಧಿಗಳನ್ನು ದೂರಮಾಡಿ ಶರಣಾಗತಿಯನ್ನು ಮಾಡಿರುವನು.

10) ತ್ರಿಜಟೆಯ ವೃತ್ತಾಂತದಲ್ಲಿ " ಅಭಿಯಾಚಾಮ ವೈದೇಹೀಮೇತದ್ಧಿ ಮಮ ರೋಚತೇ। ರಾಘವಾದ್ಧಿ ಭಯಂ ಘೋರಂ ರಾಕ್ಷಸಾನಾಮುಪಸ್ಥಿತಂ '' ಶ್ರೀರಾಮನಿಂದ ರಾಕ್ಷಸರಿಗೆ ಭಯವುಂಟಾಗಿರುವುದರಿಂದ ಆತನ ಪತ್ನಿಯಾದ ಸೀತಾದೇವಿಯನ್ನೇ ನಾವು ಬೇಡಿಕೊಳ್ಳೋಣ ಎಂಬುದೇ ನನ್ನ ಅಭಿಪ್ರಾಯವೆಂದು ತ್ರಿಜಟೆಯು ರಾಕ್ಷಸಿಯರಿಗೆ ತಿಳಿಸುತ್ತಾಳೆ. ಇದರಿಂದ ಒಬ್ಬರು ಮತ್ತೊಬ್ಬರಿಗಾಗಿ ಶರಣಾಗತಿ ಮಾಡಿದರೂ ಫಲಕಾರಿ

ಆಗುವುದು ಎಂದು ತಿಳಿದು ಬರುತ್ತದೆ.

ಈ ಮಾತಿಗೆ ಒಪ್ಪಿಕೊಂಡದ್ದರಿಂದಲೇ ರಾಕ್ಷಸಿಯರಿಗೆ ಹನುಮಂತ ನಿಂದ ಚಿತ್ರವಧೆಯು ತಪ್ಪಿತು. ಹೀಗೆಯೇ ವಿಭೀಷಣನು ಶರಣಾಗತಿ ಮಾಡಿದುದರಿಂದಲೇ ಆತನ ಮಂತ್ರಿಗಳಿಗೂ ರಕ್ಷಣೆಯಾಯಿತು. ಇದರಿಂದ ಶರಣಾಗತಿ ಮಾಡಿದವನ ಸಂಬಂಧಿಗಳೂ ಶರಣ್ಯನ ಕಟಾಕ್ಷಕ್ಕೆ ಪಾತ್ರರಾಗು ವರು ಎಂಬ ಅಂಶವು ಸ್ಪಷ್ಟಪಡುತ್ತದೆ.

ಈ ರೀತಿ ಉಪಕ್ರಮದಿಂದ ಉಪಸಂಹಾರದವರೆಗೆ ಶರಣಾಗತಿಯೇ ಮುಖ್ಯಸಾಧನವು, ಅದು ಎಲ್ಲಾ ವಿಧವಾದ ಫಲಗಳನ್ನೂ ಕೊಡುವುದು. ಮೋಕ್ಷವನ್ನೂ ಕೊಡುವುದು ಎಂಬುದನ್ನು ಈ ರಾಮಾಯಣಗ್ರಂಥವು ತಿಳಿಸುತ್ತದೆ.

III ಮೇಲೆಹೇಳಿದ ಮುಖ್ಯೋಪಾಯವಾದ ಶರಣಾಗತಿಗೆ ಭಗವತ್ಪ್ರಾಪ್ತಿಯುಂಟಾಗಿ ಆತನ ಕೈಂಕರ್ಯವೇ ಮುಖ್ಯಫಲವೆಂಬುದನ್ನು ಈ ಗ್ರಂಥವು ತಿಳಿಸುತ್ತದೆ.

1) ಉಪಕ್ರಮದಲ್ಲಿ,— ದೇವತೆಗಳು, ಶ್ರೀರಾಮನನ್ನು ಅನು ವರ್ತಿಸಿದರೆಂದು ಹೇಳಿರುವುದರಿಂದ ದೇವತೆಗಳ ಶರಣಾಗತಿಗೆ ಶ್ರೀರಾಮನ ಕೈಂಕರ್ಯವೇ ಮುಖ್ಯಫಲ. ರಾವಣನ ವಧೆಯು ಅದನ್ನು ಅನುವರ್ತಿಸಿ ಬಂದಫಲ ಅಂದರೆ ಆನುಷಂಗಿಕಫಲ.

2) ಲಕ್ಷ್ಮಣನು— "ಭವಾಂಸ್ತು ಸಹ ವೈದೇಹ್ಯಾ ಗಿರಿಸಾನುಷು ರಂಸ್ಯತೇ। ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಸ್ಸ್ವಪತಶ್ಚ ತೇ" ಎಂದು ರಾಮ ನಲ್ಲಿ ಶರಣಾಗತಿಮಾಡಿ, "ರಾಮ, ನೀನು ಸೀತೆಯೊಡನೆ ಬೆಟ್ಟದತಪ್ಪಲುಗಳ ಲ್ಲಿ ವಿಹರಿಸುತ್ತಿರು. ನೀನು ಎಚ್ಚತ್ತಿರುವಾಗಲೂ, ನಿದ್ರೆಮಾಡುತ್ತಿರುವಾಗಲೂ ನಿನಗೆ ನಾನು ಎಲ್ಲಾ ವಿಧವಾದ ಸೇವೆಗಳನ್ನು ಸಲ್ಲಿಸುವೆನು' ಎಂದು ಹೇಳಿರು ವುದರಿಂದ ಎಲ್ಲಾದೇಶ, ಎಲ್ಲಾಕಾಲ, ಎಲ್ಲಾ ಅವಸ್ಥೆಗಳಲ್ಲಿಯೂ, ಕೈಂಕರ್ಯ ಮಾಡುವುದೇ ಶರಣಾಗತಿಗೆ ಫಲವೆಂದು ತಿಳಿದುಬರುತ್ತದೆ.

3) ಭರತನೂ ಸಹ ಶ್ರೀರಾಮನ ಕೈಂಕರ್ಯಕ್ಕಾಗಿಯೇ ಆತನ

ಪಟ್ಟಾಭಿಷೇಕವಾಗಬೇಕೆಂದು ಪ್ರಾರ್ಥಿಸಿ ಮೊದಲು ಆತನ ಪಾದುಕೆಗಳ ಕೈಂಕರ್ಯವನ್ನು ಪಡೆದು, ಕೊನೆಯಲ್ಲಿ ತನ್ನ ಇಷ್ಟಾರ್ಥವನ್ನು ಹೊಂದಿದನು.

4) "ತೇ ತಂ ಸೋಮಮಿವೋದ್ಯನ್ತಂ ದೃಷ್ಟ್ವಾವೈಧರ್ಮಚಾರಿಣಃ। ಮಂಗಳಾನಿ ಪ್ರಯುಂಜಾನಾಃ ಪ್ರತ್ಯಗೃಹ್ಣ ಧೃಡವ್ರತಾಃ," ಧರ್ಮಾನುಷ್ಠಾನಪರರಾದ ದಂಡಕಾರಣ್ಯವಾಸಿಗಳು, ಉದಿಸಿ ಬಂದ ಚಂದ್ರನಂತಿರುವ ಆ ರಾಮನನ್ನು ನೋಡಿ ಧೃಡಸಂಕಲ್ಪದಿಂದ ಅವನಲ್ಲಿ ಶರಣಾಗತಿಯನ್ನು ಮಾಡಿ ಮಂಗಳವನ್ನು ಹಾಡಿದರು, ಎಂದು ಹೇಳಿರುವುದರಿಂದ, ಅವರ ಶರಣಾಗತಿಗೆ ವಾಚಿಕಕೈಂಕರ್ಯವೇ ಫಲವೆಂದು ತಿಳಿದುಬರುತ್ತದೆ.

5) ಸುಗ್ರೀವ ವಿಭೀಷಣರೇ ಮೊದಲಾದವರು ಮಾಡಿದ ಶರಣಾಗತಿಗೂ ಕೈಂಕರ್ಯವೇ ಮುಖ್ಯಫಲ. ಇತರಫಲಗಳು ಆನುಷಂಗಿಕ ಎಂಬುದು ಸ್ಪಷ್ಟ.

a) "ಅಥ ಹರಿವರನಾಥಃ ಪ್ರಾಪ್ಯ ಸಂಗ್ರಾಮಕೀರ್ತಿಂ । ನಿಶಿಚರಪತಿಮಾಜೌ ಯೋಜಯಿತ್ವಾ ಶ್ರಮೇಣ॥ ಗಗನಮತಿವಿಶಾಲಂ ಲಂಘಯಿತ್ವಾರ್ಕಸೂನುರ್ಹರಿವರಗಣಮಧ್ಯೇ ರಾಮಪಾರ್ಶ್ವಂ ಜಗಾಮ" ಕಪಿರಾಜನೂ ಸೂರ್ಯಪುತ್ರನೂ ಆದ ಸುಗ್ರೀವನು, ರಾಕ್ಷಸಾಧಿಪತಿಯಾದ ರಾವಣನನ್ನು ಯುದ್ಧದಲ್ಲಿ ಕಷ್ಟಪಡಿಸಿ ಕೀರ್ತಿಪಡೆದು ವಿಶಾಲವಾದ ಆಕಾಶಕ್ಕೆ ಹಾರಿ ಶ್ರೀರಾಮನ ಪಕ್ಕಕ್ಕೆ ಬಂದನು, ಎಂದು ಶ್ರೀರಾಮನ ಕೈಂಕರ್ಯವನ್ನೇ ಸುಗ್ರೀವನು ತನ್ನ ಶರಣಾಗತಿಗೆ ಫಲವಾಗಿ ಪಡೆದುದಾಗಿ ತಿಳಿಸಿರುತ್ತೆ.

b) "ಪರಿತ್ಯಕ್ತಾ ಮಯಾ ಲಂಕಾ ಮಿತ್ರಾಣಿ ಚ ಧನಾನಿ ಚ। ಭವದ್ಗತಂ ಮೇ ರಾಜ್ಯಂ ಚ ಜೀವಿತಂ ಚ ಸುಖಾನಿ ಚ" ನಾನು ಲಂಕೆಯನ್ನು ಬಿಟ್ಟೆ, ನನ್ನ ಸ್ನೇಹಿತರನ್ನು ಬಿಟ್ಟೆ, ನನ್ನ ಐಶ್ವರ್ಯವನ್ನೂ ಬಿಟ್ಟೆ. ನನ್ನ ರಾಜ್ಯ, ಪ್ರಾಣ, ಸುಖ ಎಲ್ಲವೂ ನಿನ್ನ ಅಧೀನವು, ಎಂದು ವಿಭೀಷಣನೂ ಶರಣಾಗತಿಯಿಂದ ಶ್ರೀರಾಮನ ಕೈಂಕರ್ಯವನ್ನು ಪಡೆದನು.

6) ಹೀಗೆಯೇ ಕಾಕಾಸುರನಿಗೆ ಶರಣಾಗತಿಯಿಂದ ಅವನ ಪ್ರಾಣ

ಸಂರಕ್ಷಣೆಯಾಯಿತು. ಆದರೆ ದುಷ್ಟಸ್ವಭಾವವುಳ್ಳ ಆತನಿಗೆ ಮತ್ತೆ ಕೆಟ್ಟ ಕೆಲಸದಲ್ಲಿ ಪ್ರವೃತ್ತಿಯುಂಟಾಗದೇ ಇರಲೆಂದು ಶಿಕ್ಷಾರೂಪವಾದ ಅನುಗ್ರಹಕ್ಕಾಗಿ ಆತನ ಒಂದು ಕಣ್ಣು ತೆಗೆಯಲ್ಪಟ್ಟಿತು.

7) ಸಮುದ್ರರಾಜನಲ್ಲಿ ಶರಣಾಗತಿಯನ್ನು ಮಾಡಿದ ಶ್ರೀರಾಮನಲ್ಲಿ ಆಕಿಂಚನ್ಯ , ಅನನ್ಯಗತಿತ್ವವೆಂಬುವು ಇಲ್ಲದ್ದರಿಂದಲೂ , ಶರಣ್ಯನಾದ ಸಮುದ್ರರಾಜನಲ್ಲಿ ಸರ್ವಜ್ಞತ್ವ, ಸರ್ವಶಕ್ತಿತ್ವವೆಂಬುವು ಇಲ್ಲದ್ದರಿಂದಲೂ ಆ ಶರಣಾಗತಿಯು ವಿಫಲವಾಯಿತು.

ಈ ಶರಣಾಗತಿಯನ್ನೇ ಈ ಗ್ರಂಥದಲ್ಲಿ ಮುಖ್ಯವಾಗಿಹೇಳಿರುವುದರಿಂದ ಈ ಗ್ರಂಥಕ್ಕೆ "ದೀರ್ಘಶರಣಾಗತಿ'', ಎಂದೂ ಪ್ರಸಿದ್ಧಿಯಿರುವುದು. ಇದನ್ನೇ ವಿಶದಪಡಿಸಲು ಇತರ ವಿಷಯಗಳು ಹೇಳಲ್ಪಟ್ಟಿವೆ. ಹೇಗೆಂದರೆ—

ಸಾಮರ್ಥ್ಯ, ದಯೆ, ಸೌಶೀಲ್ಯಗಳುಳ್ಳವನಲ್ಲಿ ಮಾಡಲ್ಪಟ್ಟ ಶರಣಾಗತಿಯು ಫಲವನ್ನು ಕೊಡುತ್ತದೆ. ರುದ್ರನ ಧನುಸ್ಸನ್ನು ಮುರಿದುದು, ಪರಶುರಾಮನನ್ನು ಜಯಿಸಿದ್ದು, ಏಳು ಮತ್ತೀಮರಗಳನ್ನೂ ಒಂದೇ ಬಾಣದಿಂದ ಕತ್ತರಿಸಿದ್ದು, ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದುದು, ಇವುಗಳಿಂದ ಶ್ರೀರಾಮನ ಸಾಮರ್ಥ್ಯವು ವ್ಯಕ್ತಪಡುವುದು. ಈತನು ಸರ್ವಜ್ಞನೆಂಬುದೂ ತಿಳಿದು ಬರುವುದು. ಸೀತೆಯ ವಿಯೋಗಕಾಲದಲ್ಲಿ ಶ್ರೀರಾಮನು ಬಹಳವಾಗಿ ದುಃಖಪಟ್ಟಿದ್ದರಿಂದ ಈತನು ಪರಮಕಾರುಣಿಕನೆಂದೂ, ''ಇತರರ ದುಃಖವನ್ನು ಕಂಡು ತಾನೂ ದುಃಖಪಡುವುದು'' ಎಂಬ ದಯೆಯು ಈತನಲ್ಲಿ ಇರುವುದಾಗಿಯೂ ಕಂಡುಬರುವುದು. ಕೀಳುಜಾತಿಯವರಾದ ಗುಹ, ಶಬರಿ, ಸುಗ್ರೀವ ಮೊದಲಾದವರೊಡನೆ ಕಲೆತು ಇದ್ದುದರಿಂದ ಶ್ರೀರಾಮನ ಸೌಶೀಲ್ಯ ಗುಣವು ವ್ಯಕ್ತಪಡುತ್ತದೆ. ಸಮರ್ಥನೂ, ಪರಮಕಾರುಣಿಕನೂ, ಸುಶೀಲನೂ ಆದ ಭಗವಂತನಲ್ಲಿ ಮಾಡಲ್ಪಟ್ಟ ಶರಣಾಗತಿಯು ಅವರವರು ಕೋರಿದ ಫಲವನ್ನು ಕೊಡುವುದು.

ಹೇಗೆಂದರೆ— ವಿಶ್ವಾಮಿತ್ರರಿಗೆ ಯಜ್ಞಸಂರಕ್ಷಣೆ, ದಂಡಕಾರಣ್ಯವಾಸಿಗಳಾದ ಋಷಿಗಳಿಗೆ ರಾಕ್ಷಸಭಯನಿವಾರಣೆ, ಇಂದ್ರಾದಿದೇವತೆಗಳಿಗೆ

ರಾವಣಭಯನಿವೃತ್ತಿ, ಅಯೋಧ್ಯಾವಾಸಿಗಳಿಗೆ ವೈಕುಂಠಲೋಕಪ್ರಾಪ್ತಿ ಇವೇ ಮೊದಲಾದ ಫಲಗಳುಂಟಾದವು. ಉತ್ತಮಾಧಿಕಾರಿಗಳು ಮಾಡುವ ಶರಣಾಗತಿಯಿಂದ ಅವರಿಗೆ ಭಗವಂತನ ಪ್ರಾಪ್ತಿಯುಂಟಾಗಿ ಆತನ ಕೈಂಕರ್ಯವೂ ಲಭಿಸುವುದು. ಇದೇ ಆ ಶರಣಾಗತಿಗೆ ಮುಖ್ಯ ಪ್ರಯೋಜನವು. ಇತರ ಫಲಗಳು ಆನುಷಂಗಿಕಗಳು.

IV ಮತ್ತು ಈ ಶರಣಾಗತಿಯು ಪುರುಷಕಾರ (ಮಧ್ಯಸ್ಥಿಕೆಯ) ಸಹಾಯವಿಲ್ಲದೆ ಫಲ ಕೊಡುವುದಿಲ್ಲವೆಂಬುದನ್ನು ಈ ಗ್ರಂಥದಲ್ಲಿ ಮುಖ್ಯವಾಗಿ ಹೇಳಿದೆ. "ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್" ಶ್ರೀರಾಮಾಯಣಕಾವ್ಯವೆಲ್ಲವೂ ಪುರುಷಕಾರಳಾದ ಸೀತಾದೇವಿಯ ಮಹಾಚರಿತ್ರೆಯಾಗಿದೆ. ಎಂದು ವಾಲ್ಮೀಕಿಮಹರ್ಷಿಗಳೇ ಹೇಳಿರುತ್ತಾರೆ.

ಸೀತಾದೇವಿಯು ಶ್ರೀರಾಮನನ್ನು ಮೂರಾವೃತ್ತಿ ಅಗಲಿದುದಾಗಿ ಶ್ರೀರಾಮಾಯಣದಲ್ಲಿ ಹೇಳಿದೆ. ಈ ಮೂರು ವಿಶ್ಲೇಷ (ಅಗಲಿಕೆ) ಗಳಿಂದ ಪುರುಷಕಾರಳಾದ ಸೀತಾದೇವಿಯಲ್ಲಿರುವ, ಕೃಪೆ, ಪಾರತಂತ್ರ್ಯ, ಅನನ್ಯಾರ್ಹತ್ವ, ಎಂಬ ಮೂರು ಗುಣಗಳು ಕ್ರಮವಾಗಿ ವ್ಯಕ್ತಪಡುತ್ತವೆ.

ಸೀತಾದೇವಿಯ ಮೂರು ವಿಶ್ಲೇಷಗಳಲ್ಲಿ ಮೊದಲನೆಯದು- ಮಾರೀಚನ ಮೋಸದಿಂದ ಸೀತೆಯು ಲಂಕೆಗೆ ಹೋದುದು. ಭಗವಂತನು ಲೋಕಸಂರಕ್ಷಣೆಗೋಸ್ಕರ ಶ್ರೀರಾಮನಾಗಿ ಅವತಾರಮಾಡಿದಾಗ, ಮಹಾಲಕ್ಷ್ಮಿಯೂ ಸೀತಾದೇವಿಯಾಗಿ ಅವತರಿಸಿದಳು. ಆ ಅವತಾರದಲ್ಲಿ ಸೀತೆಯು ತನ್ನಲ್ಲಿ ಅಸಾಧಾರಣವಾಗಿರುವ ಕೃಪಾದಿಗುಣಗಳನ್ನು ಪ್ರಕಾಶಪಡಿಸಲು ತನ್ನ ಇಚ್ಛೆಯಿಂದಲೇ ಶ್ರೀರಾಮನನ್ನು ಅಗಲಿದುದಾಗಿರುತ್ತೆ. ಸೀತಾದೇವಿಯು ರಾವಣನ ಅಶೋಕವನದಲ್ಲಿ ರಾಕ್ಷಸಿಯರಿಂದ ಹಿಂಸಿಸಲ್ಪಡುತ್ತಿರುವಾಗ ತ್ರಿಜಟೆಯು ಶ್ರೀರಾಮನಿಂದ ರಾವಣನ ವಧೆಯಾಗುವುದೆಂದು ಸ್ವಪ್ನಕಂಡಳು. ಅದರಿಂದ ತ್ರಿಜಟೆಯು ಭಯಪಟ್ಟು ಸೀತೆಯನ್ನು ಮರೆಹೊಕ್ಕಳು. ಹಾಗೆಯೆ ರಾಕ್ಷಸಿಯರೆಲ್ಲರೂ ಭಯಪಟ್ಟು ಸೀತೆಯನ್ನು ಮರೆಹೊಕ್ಕರು. ಆಗ ಸೀತೆಯು ರಾಕ್ಷಸಿಯರನ್ನೆಲ್ಲಾ ತಾನು ಕಾಪಾಡುವುದಾಗಿ ಅವರಿಗೆ ಅಭಯವಿತ್ತಳು. ರಾವಣನ

ವಧೆಯಾದ ಬಳಿಕ, ಆಂಜನೇಯನು, ರಾವಣನು ವಧೆಯಾದ ಶುಭ ವಾರ್ತೆ ಯನ್ನು ಸೀತಾದೇವಿಗೆ ತಿಳಿಸಲು ಅಲ್ಲಿಗೆ ಬಂದಾಗ 'ನಿನಗೆ ಹಿಂಸೆಕೊಟ್ಟ ರಾಕ್ಷಸಿಯರನ್ನೆಲ್ಲಾ ನನ್ನ ಕೈಗೆ ಕೊಡು, ನಾನು ಅವರನ್ನು ಚಿತ್ರವಧೆಮಾಡು ವೆನು' ಎಂದು ಕೇಳಲು, ಸೀತಾದೇವಿಯು "ಹಿಂದೆ ನಾನು ಅವರಿಗೆ ಅಭಯ ವನ್ನು ಕೊಟ್ಟಿರುವೆನು, ಆದ್ದರಿಂದ ನೀನು ಅವರನ್ನು ಕೊಲ್ಲಕೂಡದು" ಎಂದು ಹನುಮಂತನಿಗೆ ಸಮಾಧಾನಹೇಳಿ ಆಶ್ರಿತರನ್ನು ಕಾಪಾಡಿದಳು. ಇದು ಆಕೆಯಲ್ಲಿರುವ ಕೃಪಾಗುಣ, ಎಂದರೆ 'ಇತರರ ದುಃಖವನ್ನು ಕಂಡು ತಾನೂ ದುಃಖಪಡತಕ್ಕದ್ದು' ಎಂಬ ಗುಣ. ಸೀತೆಯ ಸುತ್ತಲೂ ಇದ್ದ ರಾಕ್ಷಸಸ್ತ್ರೀಯರೆಲ್ಲರೂ, ರಾವಣನು ಬಲತ್ಕಾರದಿಂದ ತಂದು ಸೆರೆಯಲ್ಲಿ ಟ್ಟಿದ್ದ ದೇವತಾಸ್ತ್ರೀಯರು. ಇವರನ್ನು ರಾವಣನ ಸೆರೆಯಿಂದ ಬಿಡಿಸುವುದ ಕ್ಕಾಗಿಯೇ ಸೀತೆಯು ಅಶೋಕವನದಲ್ಲಿ ಸೆರೆಯಲ್ಲಿದ್ದುದು. ಆದುದರಿಂದ ಸೀತಾದೇವಿಯು ಮಾರೀಚನ ಮೋಸದಿಂದ ಶ್ರೀರಾಮನನ್ನು ಅಗಲಿದುದು, ಪುರುಷಕಾರರಾಗತಕ್ಕವರಲ್ಲಿರುವ ಮುಖ್ಯವಾದ 'ಕೃಪೆ' ಎಂಬ ಒಂದನೆಯ ಗುಣವನ್ನು ಪ್ರಕಾಶಪಡಿಸುವುದಕ್ಕೆ ಎಂದು ತಿಳಿಯುವುದು.

2) ರಾವಣನ ವಧೆಯಾದಮೇಲೆ ಅಯೋಧ್ಯೆಗೆ ಬಂದ ಶ್ರೀರಾಮ ನಿಗೆ ಪಟ್ಟಾಭಿಷೇಕವಾದನಂತರ ಸೀತೆಯು ಶ್ರೀರಾಮನೊಡನೆ ವಾಸಮಾಡು ತ್ತಿರುವಾಗ ಗರ್ಭವತಿಯಾದಳು. ಆಗ ಶ್ರೀರಾಮನು 'ನಿನಗೆ ಇಷ್ಟವಾದು ದನ್ನು ಕೇಳಿಕೊ, ಅದನ್ನು ನಡೆಸಿಕೊಡುತ್ತೇನೆ' ಎಂದು ಸೀತೆಗೆ ಹೇಳಲು, ಅದಕ್ಕೆ ಅವಳು 'ಗಂಗಾತೀರದಲ್ಲಿರುವ ಋಷಿಗಳ ಆಶ್ರಮಗಳನ್ನು ನೋಡಲು ಅಪೇಕ್ಷಿಸುತ್ತೇನೆ.' ಎಂದು ಹೇಳಿದಳು. ಆ ಉದ್ದೇಶಕ್ಕಾಗಿ ಸೀತೆಯನ್ನು ಕಳುಹಿಸುವ ವ್ಯಾಜದಿಂದ, 'ರಾವಣನ ಮನೆಯಲ್ಲಿ ಇದ್ದು ಅಪರಿಶುದ್ಧಳಾದ ಸೀತೆಯನ್ನು ರಾಮನು ಪುನಃ ಸೇರಿಸಿಕೊಂಡನು.' ಎಂಬುದಾಗಿ ಯಾವನೋ ಹೇಳಿದ ಅಪವಾದಕ್ಕೆ ಹೆದರಿ, ಹಿಂದೆ ಅಗ್ನಿಪ್ರವೇಶ ದಿಂದ ಅವಳ ಪಾರಿಶುದ್ಧ್ಯವು ವ್ಯಕ್ತಪಟ್ಟಿದ್ದರೂ, ರಾಮನು ಆ ಸೀತೆಯನ್ನು ಲಕ್ಷ್ಮಣನೊಡನೆ ಕಾಡಿಗೆ ಕಳುಹಿಸಿದನು.

ಇದು, ಸೀತೆಯು ಶ್ರೀರಾಮನನ್ನು ಅಗಲಿದುದು. ಎರಡನೆಯ ಆವೃತ್ತಿ.

ಲಕ್ಷ್ಮಣನು ಶ್ರೀರಾಮನ ಅಭಿಪ್ರಾಯವನ್ನು ಸೀತೆಗೆ ಕಾಡಿನಲ್ಲಿ ತಿಳಿಸಿದಾಗ, ಅವಳು 'ನಾನು ಈಗಲೇ ಗಂಗಾನದಿಯಲ್ಲಿ ಬಿದ್ದು ಪ್ರಾಣತ್ಯಾಗ ಮಾಡಬೇಕು, ಆದರೂ ಪತ್ನಿಯು ಪತಿಗೆ ಪರತಂತ್ರಳಾಗಿರುವುದು ನನ್ನ ಸ್ವರೂಪವಾದ್ದರಿಂದ ನನ್ನ ಪ್ರಾಣತ್ಯಾಗಕ್ಕೆ ಪತಿಯ ಅಪ್ಪಣೆಯಿಲ್ಲವಾದ ಕಾರಣ, ನಾನು ಪ್ರಾಣವನ್ನು ಧರಿಸಿರುತ್ತೇನೆ'' ಎಂದು ಹೇಳಿ ಜೀವಂತಳಾಗಿದ್ದಳು. ಇದು ಅವಳ 'ಪಾರತಂತ್ರ್ಯ' ಎಂಬ ಎರಡನೆಯ ಗುಣವನ್ನು ವ್ಯಕ್ತಪಡಿಸುತ್ತದೆ.

3) ಶ್ರೀರಾಮನು ಅಶ್ವಮೇಧಯಾಗವನ್ನು ಮಾಡುತ್ತಿರುವಾಗ ಶ್ರೀವಾಲ್ಮೀಕಿಋಷಿಗಳ ಅಪ್ಪಣೆಯ ಪ್ರಕಾರ ಕುಶಲವರು ಅಯೋಧ್ಯೆಗೆ ಬಂದು ಶ್ರೀರಾಮಾಯಣವನ್ನು ಹಾಡುತ್ತಿದ್ದರು. ಅದನ್ನು ಶ್ರೀರಾಮನು ಕೇಳಿ ಆ ಕುಶಲವರನ್ನು ತನ್ನ ಆಸ್ಥಾನಕ್ಕೆ ಕರೆದು, ವಿದ್ವಾಂಸರನ್ನೆಲ್ಲಾ ಸೇರಿಸಿ ಆ ಹುಡುಗರ ಗಾನವನ್ನು ಕೇಳುತ್ತಿರುವಾಗ, ಆ ಇಬ್ಬರೂ ಸೀತಾದೇವಿಯ ಮಕ್ಕಳೆಂದು ತಿಳಿದನು. ಆಗ ಆತನ ಮನಸ್ಸು ಸೀತೆಯಮೇಲೆ ಹೋಯಿತು. ಆಗ ಸೀತೆಯು ''ಆತ್ಮಸಾಕ್ಷಿಕವಾಗಿ ಪರಿಶುದ್ಧಳಾಗಿದ್ದ ಪಕ್ಷದಲ್ಲಿ, ನಾಳೆ ಅವಳು ಈ ಸಭೆಗೆ ಬಂದು ತನ್ನ ಪಾರಿಶುದ್ಧ್ಯವನ್ನು ಪ್ರಕಾಶಪಡಿಸಿ ನಂಬಿಕೆಯನ್ನುಂಟುಮಾಡಲಿ" ಎಂದು ಶ್ರೀರಾಮನು ವಾಲ್ಮೀಕಿಗೂ ಸೀತೆಗೂ ದೂತನಮೂಲಕ ಹೇಳಿಕಳುಹಿಸಿದನು. ಅದರಂತೆ ಸೀತೆಯು ವಾಲ್ಮೀಕಿಯೊಡನೆ ಆ ದೊಡ್ಡ ಸಭೆಯಲ್ಲಿರುವ ಶ್ರೀರಾಮನ ಸಮೀಪಕ್ಕೆ ಬಂದು ನಿಂತಾಗ ''ಇವಳು ಶುದ್ಧಳು, ಇವಳನ್ನು ಪರಿಗ್ರಹಿಸು," ಎಂದು ವಾಲ್ಮೀಕಿಯು ಅನೇಕಸಲ ಹೇಳಿದರು. ಆಗ ಶ್ರೀರಾಮನು 'ಇವಳು ಶುದ್ಧಳೆಂದು ನನಗೂ ತಿಳಿದಿದೆ. ಇದರಮೇಲೆ ವಾಲ್ಮೀಕಿಯು ಹೇಳಿರುವುದೇ ಸಾಕು. ಆದರೂ ಲೋಕಾಪವಾದವನ್ನು ಹೋಗಲಾಡಿಸುವುದಕ್ಕೋಸ್ಕರ ಒಂದು ನಂಬಿಕೆಯನ್ನು ಈ ಸಭೆಯಲ್ಲಿ ತೋರಿಸಲಿ,' ಎಂದು ಹೇಳಿದನು.

ಆಗ ಸೀತೆಯು ಕೈಮುಗಿದುಕೊಂಡು ತಲೆಯನ್ನು ಬಗ್ಗಿಸಿ ಕೆಳಗಡೆ ಯಲ್ಲಿ ನೋಡುತ್ತಾ ಈ ರೀತಿ ಹೇಳುತ್ತಾಳೆ, "ನಾನು ಶ್ರೀರಾಮನಿಗಿಂತ ಬೇರೆಯವರನ್ನು ಮನಸ್ಸಿನಿಂದಲೂಕೂಡ ನೆನೆಯದೆ ಇದ್ದ ಪಕ್ಷದಲ್ಲಿ, ಈ ಭೂದೇವಿಯು ಬಾಯಿಬಿಟ್ಟು ತನ್ನೊಳಗೆ ನನ್ನನ್ನು ಸೇರಿಸಿಕೊಳ್ಳಲಿ, ನಾನು ಮನೋವಾಕ್ಕಾಯಗಳಿಂದ ಶ್ರೀರಾಮನನ್ನೇ ಸೇರಿದವಳಾಗಿದ್ದರೆ ಈಕೆಯು ನನ್ನನ್ನು ತನ್ನಲ್ಲಿಗೆ ಕರೆದುಕೊಳ್ಳಲಿ. ನಾನು ಶ್ರೀರಾಮನಲ್ಲದೆ ಬೇರೊಬ್ಬ ರನ್ನು ಅರಿಯೆನು, ಎಂಬುದು ಸತ್ಯವಾಗಿದ್ದರೆ ಈ ಭೂದೇವಿಯು ನನ್ನನ್ನು ತನ್ನಲ್ಲಿಗೆ ಕರೆದುಕೊಳ್ಳಲಿ" ಎಂದು ಸೀತಾದೇವಿಯು ಪ್ರತಿಜ್ಞೆಮಾಡಿದಳು.

ಆಗ ಭೂಮಿಯೊಳಗಿನಿಂದ ಒಂದು ದಿವ್ಯವಾದ ಸಿಂಹಾಸನವು ಮೇಲಕ್ಕೆ ಎದ್ದುಬಂತು. ಅದು ನಾನಾರತ್ನಗಳಿಂದ ಅಲಂಕರಿಸಲ್ಪಟ್ಟಿತ್ತು. ಅದನ್ನು ಸರ್ಪಗಳು ತಲೆಯಲ್ಲಿ ಹೊತ್ತಿದ್ದವು. ಭೂದೇವಿಯು ತನ್ನ ತೋಳುಗಳಿಂದ ಆ ಸೀತೆಯನ್ನು ಎತ್ತಿ ಆ ಸಿಂಹಾಸನದಲ್ಲಿ ಕುಳ್ಳಿರಿಸಿಕೊಂಡು ಪಾತಾಳ ಲೋಕಕ್ಕೆ ಹೋಗುತ್ತಿರುವಾಗ ಸೀತೆಯಮೇಲೆ ಪುಷ್ಪವೃಷ್ಟಿಯಾಯಿತು.

ಈ ರೀತಿಯಲ್ಲಿ ಸೀತೆಯು ಶ್ರೀರಾಮನನ್ನು ಅಗಲಿದುದು ಮೂರನೆಯ ಆವೃತ್ತಿ, ಈ ಅಗಲುವಿಕೆಯಿಂದ ಸೀತೆಯು ಬೇರೆಯಾರಿಗೂ ಉಪಯೋಗ ಪಡದೇ ಸ್ವಾಮಿಯಾದ ಶ್ರೀರಾಮನಿಗೆ ಉಪಯೋಗಪಡತಕ್ಕವಳು ಎಂಬ 'ಅನನ್ಯಾರ್ಹಶೇಷತ್ವ' ಎಂಬ ಮೂರನೆಯ ಗುಣವು ಪ್ರಕಾಶಪಡುತ್ತದೆ.

ಹೀಗೆ, ಪುರುಷಕಾರವಾಗುವುದಕ್ಕೆ ಬೇಕಾದ ಕೃಪೆ, ಪಾರತಂತ್ರ್ಯ, ಅನನ್ಯಾರ್ಹಶೇಷತ್ವ ಎಂಬ ಮೂರು ಗುಣಗಳೂ ಸೀತೆಯಲ್ಲಿ ವಿಶೇಷವಾಗಿ ಇದ್ದುದರಿಂದಲೇ ಅದನ್ನು ಪ್ರಕಾಶಪಡಿಸುವ ಶ್ರೀರಾಮಾಯಣವು ಸೀತೆಯ ಮಹಾಚರಿತ್ರೆ ಎಂದು ವಾಲ್ಮೀಕಿಯು ಹೇಳಿರುವುದು ಯುಕ್ತವಾಗಿಯೇ ಇದೆ.

ಇದರಿಂದ ಪುರುಷಕಾರಮೂಲಕವಾಗಿಯೇ ಭಗವಂತನಲ್ಲಿ ಶರಣಾಗತಿ ಮಾಡುವುದು, ಅವನನ್ನು ಹೊಂದಲು ಮುಖ್ಯೋಪಾಯ. ಎಂದು ಹೇಳಿದೆ,

V ಈ ಶರಣಾಗತಿಯ ಮೂಲಕ ಭಗವಂತನನ್ನು ಹೊಂದತಕ್ಕ ಅಧಿಕಾರಿಗೆ, ಶೇಷತ್ವ, ಪಾರತಂತ್ರ್ಯಗಳು ಇರಬೇಕು. ಶೇಷತ್ವವೆಂದರೆ- ಭಗವಂತನ ಇಷ್ಟದಂತೆ ತನ್ನನ್ನು ವಿನಿಯೋಗಪಡಿಸಿಕೊಳ್ಳುವುದಕ್ಕೆ ಅರ್ಹ ನಾಗಿರತಕ್ಕದ್ದು. ಪಾರತಂತ್ರ್ಯವೆಂದರೆ- ಭಗವಂತನ ಇಷ್ಟದಂತೆ ಉಪಯುಕ್ತ ವಾದದ್ದು. ಇವುಗಳಲ್ಲಿ ಶೇಷತ್ವಸ್ವರೂಪವನ್ನು ಲಕ್ಷ್ಮಣನು ಆಚರಿಸಿ ತೋರಿ ಸಿರುವನು. ಹೇಗೆಂದರೆ- 'ಅಹಮಸ್ಯಾವರೋ ಭ್ರಾತಾ ಗುಣೈರ್ದಾಸ್ಯಮುಪಾ ಗತಃ' ಎಂದು ನಾನು ಇವನಿಗೆ ತಮ್ಮನಾದರೂ, ಅವನ ಗುಣಗಳಿಂದ ಅವನಿಗೆ ದಾಸನಾಗಿದ್ದೇನೆ. "ಕುರುಷ್ವ ಮಾಮನುಚರಂ". ನನ್ನನ್ನು ನೀನು ಕಿಂಕರನನ್ನಾಗಿ ಮಾಡಿಕೊ. 'ಕೃತಾರ್ಥೋಽಹಂ ಭವಿಷ್ಯಾಮಿ' ನಾನು ಕೃತಾರ್ಥ ನಾಗುತ್ತೇನೆ. ಎಂದು ಲಕ್ಷ್ಮಣನು, ರಾಮನನ್ನು ಬಿಟ್ಟು ಅಗಲದೆ ಅವನ ಉಪಯೋಗಕ್ಕಾಗಿಯೇ ಇರುವನು, ಎಂದು ಹೇಳಿದ್ದರಿಂದ ಶೇಷತ್ವವನ್ನು ತೋರಿಸಿದಂತೆ ಆಯಿತು.

VI ಪಾರತಂತ್ರ್ಯಸ್ವರೂಪವನ್ನು ಭರತನು ತೋರಿಸಿರುವನು. 'ರಾಜ್ಯಂ ಚಾಹಂ ಚ ರಾಮಸ್ಯ' ಎಂದು, ರಾಜ್ಯವೂ, ನಾನೂ, ರಾಮ ನಿಗೆ ಸೇರಿದ ವಸ್ತುಗಳು. ಎಂಬುದಾಗಿ ಭರತನು ತಾನು ರಾಮನಿಗೆ ಅಧೀನ ಎಂಬುದನ್ನು ತಿಳಿಸಿರುವುದರಿಂದ ಪಾರತಂತ್ರ್ಯವನ್ನು ತೋರಿಸಿದಂತೆ ಆಯಿತು.

VII ಭಾಗವತಪಾರತಂತ್ರ್ಯಸ್ವರೂಪವನ್ನು ಶತ್ರುಘ್ನನು ತೋರಿಸಿ ಇರುವನು. 'ಗಚ್ಛತಾ ಮಾತುಲಕುಲಂ ಭರತೇನ ತದಾನಘಃ। ಶತ್ರುಘ್ನೋ ನಿತ್ಯಶತ್ರುಘ್ನಃ ನೀತಃ ಪ್ರೀತಿಪುರಸ್ಕೃತಃ'- ಎಂದು, ಮಾವನ ಮನೆಗೆ ಹೊರಟ ಭರತನು ಶತ್ರುಘ್ನನನ್ನು ಪ್ರೀತಿಯೊಡನೆ ಎಳೆದುಕೊಂಡು ಹೋದನು. ಎಂದು ಹೇಳಿರುವುದರಿಂದ, ಭಗವದ್ಭಕ್ತನಾದ ಭರತನಿಗೆ ಶತ್ರುಘ್ನನು ಪರತಂತ್ರ ನಾಗಿದ್ದುದರಿಂದ ಭಾಗವತಪಾರತಂತ್ರ್ಯವನ್ನು ತೋರಿಸಿದಂತೆ ಆಯಿತು.

VIII ಈ ವಿಧವಾದ ಅಧಿಕಾರಿಗಳು ತಿಳಿಯಬೇಕಾದ ಅರ್ಥಪಂಚಕ ವನ್ನು ಈ ಗ್ರಂಥದಲ್ಲಿ ತಿಳಿಸಿದೆ, ಹೇಗೆಂದರೆ—

"ಪ್ರಾಪ್ಯಸ್ಯ ಬ್ರಹ್ಮಣೋ ರೂಪಂ ಪ್ರಾಪ್ತುಶ್ಚ ಪ್ರತ್ಯಗಾತ್ಮನಃ। ಪ್ರಾಪ್ತ್ಯುಪಾಯಂ ಫಲಂ ಪ್ರಾಪ್ತೇ ಸ್ತಥಾ ಪ್ರಾಪ್ತಿವಿರೋಧಿ ಚ॥ ವದನ್ತಿ ಸಕಲಾ ವೇದಾಸ್ಸೇತಿಹಾಸಪುರಾಣಕಾಃ ॥ ಮುನಯಶ್ಚ ಮಹಾತ್ಮಾನೋ ವೇದವೇದಾಂಗಪಾರಗಾಃ॥ ಎಂದು ಸಕಲ ವೇದಗಳೂ, ಇತಿಹಾಸ ಪುರಾಣ ಗಳೂ, ವೇದವೇದಾಂಗಪಾರಂಗತರಾದ ಮಹಾತ್ಮರಾದ ಋಷಿಗಳೂ ಹೇಳಿರು ವಂತೆ ಪ್ರಾಪ್ಯನಾದ ಬ್ರಹ್ಮನ ಸ್ವರೂಪವನ್ನೂ, ಪ್ರಾಪ್ತೃವಾದ (ಹೊಂದ ಬೇಕೆಂದಿರುವ) ಜೀವಾತ್ಮನ ಸ್ವರೂಪವನ್ನೂ ಹೊಂದಲುಬೇಕಾದ ಉಪಾಯ ಸ್ವರೂಪವನ್ನೂ, ಹೊಂದಿದರಿಂದ ಬರುವ ಫಲಸ್ವರೂಪವನ್ನೂ, ಹೊಂದಲು ಬರುವ ವಿರೋಧದ ಸ್ವರೂಪವನ್ನೂ ಸಹ ಮೇಲಿನ ಪ್ರಮಾಣವಚನಗಳ ಹೇಳಿರುತ್ತವೆ. ಪ್ರಾಪ್ಯನಾದ ಪರಬ್ರಹ್ಮನು ಶ್ರೀರಾಮನೇ ಎಂದೂ, ಅವನನ್ನು ಹೊಂದುವ ಜೀವಾತ್ಮನು ಅವನಿಗೆ ಶೇಷಭೂತನೆಂದೂ, ಲಕ್ಷ್ಮಣನ ನಡತೆಯಿಂದಲೂ, ಪರಬ್ರಹ್ಮನನ್ನು ಹೊಂದಲು, ಶರಣಾಗತಿಯೇ ಉಪಾಯ ವೆಂದು ಅನೇಕರ ಆಚರಣೆಯಿಂದಲೂ, ಆ ಪರಬ್ರಹ್ಮನಾದ ಶ್ರೀರಾಮನ ಪ್ರಾಪ್ತಿಗೆ ಫಲವು, ಆತನ ಕೈಂಕರ್ಯವೆಂದೂ ಇದಕ್ಕೆ ವಿರೋಧಿಯಾದುದು ಶ್ರೀರಾಮನಿಗೆ ವಿರುದ್ಧವಾಗಿ ನಡೆಯುವುದೇ ಎಂದೂ (ಇದು ರಾವಣನ ನಡ ತೆಯಿಂದ ವ್ಯಕ್ತಪಡುತ್ತದೆ) ಹೀಗೆ ಸಕಲ ಶಾಸ್ತ್ರ ಸಾರವಾದ ಅರ್ಥಪಂಚಕವು ಈ ಗ್ರಂಥದಲ್ಲಿ ತಿಳಿಸಲ್ಪಟ್ಟಿದೆ.

IX ಶರಣಾಗತಿಯನ್ನು ಮಾಡುವವನಲ್ಲಿ ಆಕಿಂಚನ್ಯ, ಅನನ್ಯಗತಿತ್ವ ಎಂಬ ಎರಡು ಗುಣಗಳಿರಬೇಕು. ಶರಣಾಗತಿಯನ್ನು ಮಾಡುವುದಕ್ಕೆ ತನ್ನಲ್ಲಿ ಯಾವುದೊಂದು ಉಪಾಯವೂ ಇಲ್ಲ, ಎಂಬುದು ಆಕಿಂಚನ್ಯ, ಮತ್ತು ಶರಣ್ಯನಾದವನನ್ನು (ಯಾರಲ್ಲಿ ಶರಣಾಗತಿಮಾಡುತ್ತಾನೆಯೋ ಅವನನ್ನು) ಬಿಟ್ಟರೆ ತನಗೆ ಬೇರೆ ಗತಿಯಿಲ್ಲವೆಂಬುದು ಅನನ್ಯಗತಿತ್ವವು.

X 'ಶರಣಾಗತಿಮಾಡತಕ್ಕ ಅಧಿಕಾರಿಗೆ ಆಚಾರ್ಯಮುಖೇನ ಭಗ ವಂತನ ಜ್ಞಾನವು ಲಭಿಸುವುದು', ಎಂಬ ತತ್ತ್ವವು ಸೀತೆಗೆ ಆಂಜನೇಯನ ಮೂಲಕ ತಿಳಿಯಿತು, ಎಂದು ಈ ಗ್ರಂಥದಲ್ಲಿ ಹೇಳಿದೆ.

XI ಶರಣಾಗತನು, ತನಗೆ ಮೋಕ್ಷವು ಬರಬೇಕೆಂದಿದ್ದರೆ ತನ್ನ ಪ್ರಾಚೀನಕರ್ಮದಿಂದ ತನಗೆ ಈಗ ಬಂದಿರುವ ಶರೀರವು ನಾಶವಾಗುವವರೆಗೆ ನಿರೀಕ್ಷಿಸಬೇಕು ಎಂಬ ವಿಷಯವು—

'ಶರೈಸ್ತು ಸಂಕುಲಾಂ ಕೃತ್ವಾ ಲಂಕಾಂ ಪರಬಲಾರ್ದನಃ । ಮಾಂ ನಯೇದ್ಯದಿ ಕಾಕುತ್ಸ್ಥಃ ತತ್ತಸ್ಯಸದೃಶಂ ಭವೇತ್॥ ಶತ್ರುಸೈನ್ಯಗಳನ್ನು ನಾಶ ಮಾಡತಕ್ಕ ಶ್ರೀರಾಮನು ತನ್ನ ಬಾಣಗಳಿಂದ ಲಂಕೆಯನ್ನು ಹಾಳುಮಾಡಿ, ರಾವಣನನ್ನು ಸಂಹರಿಸಿ, ನನ್ನನ್ನು ತನ್ನಲ್ಲಿಗೆ ಕರೆದುಕೊಂಡು ಹೋಗುವುದು ಅವನಿಗೆ (ಅವನ ಪರಾಕ್ರಮಕ್ಕೆ) ತಕ್ಕದ್ದಾಗಿದೆ. ಎಂಬುದು ಸೀತೆಯ ವಾಕ್ಯದಿಂದ ವ್ಯಕ್ತವಾಗುವುದು. ಇದರಿಂದ—

ಲಂಕೆಯೇ ಶರೀರ, ಅದರಲ್ಲಿ ಬದ್ಧಳಾಗಿರುವ ಸೀತೆಯೇ ಜೀವಾತ್ಮಾ, ರಾವಣ ಕುಂಭಕರ್ಣರೇ ಅಹಂಕಾರ ಮಮಕಾರಗಳು, ಇಂದ್ರಜಿತ್ ಮೊದಲಾದವರೇ ಕಾಮಕ್ರೋಧಾದಿಗಳು, ವಿಭೀಷಣನೇ ವಿವೇಕ. ಹೀಗೆ ಲಂಕೆಯೆಂಬ ಶರೀರದಲ್ಲಿ ಸಿಕ್ಕಿಬಿದ್ದಿರುವ ಸೀತೆಯೆಂಬ ಜೀವನಿಗೆ ಆಂಜನೇಯನೆಂಬ ಆಚಾರ್ಯನ ಅನುಗ್ರಹದಿಂದ ಕಾಮಕ್ರೋಧಾದಿಗಳು ಹೋಗಿ ವಿವೇಕ ಬಂದ ಮೇಲೆ ಶ್ರೀರಾಮನೆಂಬ ಭಗವಂತನ ಸಾನ್ನಿಧ್ಯವೆಂಬ ಮೋಕ್ಷವು ಲಭಿಸಿತು. ಎಂಬ ಅಂತರಾರ್ಥವು ವ್ಯಕ್ತವಾಗುತ್ತದೆ.

XII ಈ ಅಧಿಕಾರಿಯು (ಶರಣಾಗತಿಮಾಡಿದವನು) ಶ್ರೀರಾಮನಂತೆ ನಡತೆಯುಳ್ಳವನಾಗಿರಬೇಕಲ್ಲದೇ ರಾವಣನಂತೆ ಇರಕೂಡದು ಎಂಬ ವಿವೇಕವನ್ನು ಈ ಗ್ರಂಥವು ತಿಳಿಸುತ್ತದೆ.

XIII ಶ್ರೀರಾಮನು ವಾಸಮಾಡಿದ ಅಯೋಧ್ಯೆಯಲ್ಲಿ ಇದ್ದವರೆಲ್ಲರಿಗೂ ಕೊನೆಗೆ ಮೋಕ್ಷವುಂಟಾಯಿತು ಎಂದು ಹೇಳಿರುವುದರಿಂದ, ಈ ಅಧಿಕಾರಿಗೆ, ಭಗವಂತನ ಸಾನ್ನಿಧ್ಯವುಳ್ಳ ದೇಶವೇ ವಾಸಕ್ಕೆ ಯೋಗ್ಯವಾದುದು, ಎಂಬ ವಿಷಯವು ವ್ಯಕ್ತಪಡುತ್ತದೆ.

XIV 'ದ್ವಯ' ವೆಂಬ ಮಂತ್ರದ ಅರ್ಥವನ್ನೇ ಶ್ರೀರಾಮಾಯಣವು ವಿಶದಪಡಿಸುತ್ತದೆ. ಆದ್ದರಿಂದ ಇದನ್ನು ಸದಾ ಪಠನಮಾಡುತ್ತಾ ಕಾಲ

ಕಳೆಯಬೇಕು. ಪೂರ್ವಾಚಾರ್ಯರುಗಳು ಇದಕ್ಕಾಗಿಯೇ ಶ್ರೀರಾಮಾಯಣ ವನ್ನು 'ದೀರ್ಘ ಶರಣಾಗತಿ' ಎಂದು ಹೇಳಿರುವರು. ದ್ವಯವನ್ನು ಅರ್ಥ ದೊಡನೇ ಯಾವಾಗಲೂ ಹೇಳುತ್ತಿರಬೇಕೆಂದು ಶ್ರೀರಾಮಾನುಜಾಚಾರ್ಯರು ತಮ್ಮ ಗದ್ಯಗ್ರಂಥದಲ್ಲಿ "ದ್ವಯಮರ್ಥಾನುಸಂಧಾನೇನ ಸಹ ಸದೈವಂ ವಕ್ತಾ" ಎಂಬ ವಾಕ್ಯದಿಂದ ತಿಳಿಸಿರುವರು. ಶ್ರೀರಾಮಾಯಣದ ಬಾಲ ಕಾಂಡದಲ್ಲಿ,-ದ್ವಯಮಂತ್ರದಲ್ಲಿರುವ "ಶ್ರೀಮತ್" ಪದದ ಅರ್ಥವನ್ನೂ, ಅಯೋಧ್ಯಾಕಾಂಡದಲ್ಲಿ ಭಗವಂತನ ಕಲ್ಯಾಣಗುಣಗಳನ್ನು ಹೇಳಿರುವುದ ರಿಂದ, "ನಾರಾಯಣ" ಪದದ ಅರ್ಥವನ್ನೂ, ಅರಣ್ಯಕಾಂಡದಲ್ಲಿ- ದಿವ್ಯ ಮಂಗಳವಿಗ್ರಹವನ್ನು " ತೇ ತಂ ಸೋಮಮಿವೋದ್ಯಸ್ತಂ " ಎಂದು ವಿವರಿಸಿರುವುದರಿಂದ "ಚರಣ" ಪದದ ಅರ್ಥವನ್ನೂ, ಕಿಷ್ಕಿಂಧಾಕಾಂಡ ಮತ್ತು ಸುಂದರಕಾಂಡಗಳಲ್ಲಿ-ಉಪಾಯವೆಂಬ "ಶರಣ" ಪದದ ಅರ್ಥ ವನ್ನೂ, ಯುದ್ಧಕಾಂಡದಲ್ಲಿ-ದೃಢವಿಶ್ವಾಸವೆಂಬ 'ಪ್ರಪದ್ಯೆ" ಎಂಬ ಪದದ ಅರ್ಥವನ್ನೂ ತಿಳಿಸಿರುತ್ತದೆ. ಉತ್ತರಕಾಂಡದಲ್ಲಿ "ಮೋಕ್ಷ" ಫಲವನ್ನು ತಿಳಿಸಿರುವುದರಿಂದ ಈ ದ್ವಯಮಂತ್ರದ ಉತ್ತರಭಾಗದ ಅರ್ಥವನ್ನೂ ಹೇಳಿ ದಂತಾಯಿತು.

XV ಈ ಅಧಿಕಾರಿಯು ರಾಮಾಯಣವನ್ನೇ ಸದಾ ಜಪಮಾಡ ತಕ್ಕುದೆಂದು ತಿಳಿಸುವುದಕ್ಕಾಗಿ ಈ ಗ್ರಂಥದಲ್ಲಿ ಗಾಯಿತ್ರಿ ಮಂತ್ರದ ಅರ್ಥವು ಹೇಳಲ್ಪಟ್ಟಿದೆ. ಬಾಲಕಾಂಡದಲ್ಲಿ — ಜಗತ್ತಿನ ಸೃಷ್ಟಿಗೆ ಕಾರಣನಾದ ಭಗವಂತನ ಸ್ವರೂಪವನ್ನು ವರ್ಣಿಸಿರುವುದರಿಂದ 'ಸವಿತೃ' ಎಂಬ ಗಾಯಿಂತ್ರಿ ಮಂತ್ರದೊಳಗಿನ ಪದದ ಅರ್ಥವೂ, ಅಯೋಧ್ಯಾ ಮತ್ತು ಕಿಷ್ಕಿಂಧಾ ಕಾಂಡಗಳಲ್ಲಿ ಗುಣಗಳನ್ನು ವರ್ಣಿಸಿರುವುದರಿಂದ 'ವರೇಣ್ಯ' ಪದದ ಅರ್ಥ ವೂ, ಅರಣ್ಯಕಾಂಡದಲ್ಲಿ ತೇಜೋಮಂಡಲ ಶರೀರವನ್ನು ವರ್ಣಿ ಸಿರುವುದರಿಂದ 'ಭರ್ಗ' ಪದದ ಅರ್ಥವೂ, ಸುಂದರಕಾಂಡದಲ್ಲಿ ದಿವ್ಯಮಂಗಳವಿಗ್ರಹವನ್ನು ವರ್ಣಿಸಿರುವುದರಿಂದ 'ದೇವ' ಪದದ ಅರ್ಥವೂ. ಯುದ್ಧಕಾಂಡದಲ್ಲಿ 'ಧೀಮಹಿ' ಪದದ ಅರ್ಥವೂ, ಉತ್ತರ

ಕಾಂಡದಲ್ಲಿ 'ಮೋಕ್ಷ' ವೆಂಬ ಫಲವು ಹೇಳಲ್ಪಟ್ಟಿರುವುದರಿಂದ ಗಾಯಿತ್ರಿಯ ಅರ್ಥವೆಲ್ಲವೂ ವಿವರಿಸಲ್ಪಟ್ಟಂತಾಯಿತು.

XVI ಶರಣಾಗತನಿಗೆ ಚಾರ್ವಾಕ, ಬೌದ್ಧಮೊದಲಾದ ವೇದ ಬಾಹ್ಯ ಶಾಸ್ತ್ರಗಳ ಸಂಬಂಧವು ಕೂಡದೆಂಬುದನ್ನು ಜಾಬಾಲಿಯ ವೃತ್ತಾಂತ ದಿಂದ ತಿಳಿಸುತ್ತದೆ ಮತ್ತು 'ಶರಣಾಗತಿಯು ಫಲಪ್ರದವಾಗಬೇಕಾದರೆ ಪುರು ಷಕಾರವು ಅವಶ್ಯಕ" ಎಂಬ ವಿಷಯುವೂ ಈ ಗ್ರಂಥದಿಂದ ಸ್ಪಷ್ಟಪಡುತ್ತದೆ. ಹೇಗೆಂದರೆ— ಕಾಕಾಸುರನು ಶ್ರೀರಾಮನಲ್ಲಿ ಶರಣಾಗತಿಯನ್ನು ಮಾಡು ವಾಗ, ಸೀತಾದೇವಿಯ ಪುರುಷಕಾರವಿದ್ದುದರಿಂದ ಅವನು ಬದುಕಿದನು. ರಾವಣನಿಗೆ ಸೀತೆಯ ಪುರುಷಕಾರವಿಲ್ಲದ್ದರಿಂದ ಅವನು ಮಡಿದನು. ಹೀಗೆಯೆ ವಿಭಿಷಣನೂ ಕೂಡ ಸುಗ್ರೀವಾದಿಗಳ ಪುರುಷಕಾರದ ಬಲದಿಂದ ಶ್ರೀರಾಮ ನನ್ನು ಶರಣುಹೊಂದಿದನು. ಸುಗ್ರೀವನು ಹನುಮಂತನ ಪುರುಷಕಾರದ ಮೂಲಕ ಶ್ರೀರಾಮನಲ್ಲಿ ಶರಣಾಗತಿಯನ್ನುಮಾಡಿ ರಾಜ್ಯವನ್ನು ಪಡೆದನು ಇತ್ಯಾದಿ.

XVII ಸಂಸಾರಸಂಬಂಧವು ಮಹಾಪುರುಷರಿಗೂ ಕೂಡ ದುಃಖ ವನ್ನುಂಟುಮಾಡುವುದು. ಆದ್ದರಿಂದ ಸಂಸಾರದಲ್ಲಿ ಎಲ್ಲರೂ ವೈರಾಗ್ಯವನ್ನು ಹೊಂದಬೇಕೆಂಬುದನ್ನು ತಿಳಿಸಲು, ಬ್ರಹ್ಮಾಸ್ತ್ರಗಳಿಂದ ಆಂಜನೇಯಾದಿಗಳಿಗೆ ಬಂಧನವಾಯಿತೆಂದೂ, ಶ್ರೀರಾಮನಿಗೂ ರಾಜ್ಯಭ್ರಂಶ, ಸೀತಾಪಹಾರ, ನಾಗಪಾಶಬಂಧನ ಇವೇ ಮುಂತಾದುವು ಆದುವೆಂದೂ ಹೇಳಲ್ಪಟ್ಟಿದೆ.

XVIII ಲೋಕವ್ಯವಹಾರಕ್ಕಾಗಿ ಅರವತ್ತುನಾಲ್ಕು ವಿದ್ಯೆಗಳೂ ಇವರಲ್ಲಿ ಹೇಳಲ್ಪಟ್ಟಿವೆ.

ಹೀಗೆ ಈ ಗ್ರಂಥವು ವೇದದ ಅರ್ಥವನ್ನು ವಿವರಿಸಿರುವುದಲ್ಲದೆ ವೇದಾಂಗವಾದ, ಶಿಕ್ಷೆ, ವ್ಯಾಕರಣ ಮೊದಲಾದುವುಗಳ ಅರ್ಥವನ್ನೂ ಸಹ ಸಂಕ್ಷೇಪವಾಗಿ ತಿಳಿಸಿರುತ್ತದೆ

ಈ ಹದಿನೆಂಟು ಅರ್ಥಗಳೂ ಶ್ರೀಶೈಲಪೂರ್ಣರಿಂದ ಶ್ರೀರಾಮಾನುಜಾ ಚಾರ್ಯರಿಗೆ ಉಪದೇಶಿಸಲ್ಪಟ್ಟು ಪರಂಪರೆಯಾಗಿ ಇಲ್ಲಿನವರೆಗೂ ಬಂದಿದೆ.

—: ಸಂಪೂರ್ಣಂ :—